**III.** **ವಾಸದ ಘಟಕಗಳ ವಿವರಗಳು ಈ ಕೆಳಗಿನಂತಿದೆ.**

| ಕ್ರಮ ಸಂಖ್ಯೆ | ವರ್ಗ | ಮಾಸಿಕ ವರಮಾನ ರೂ.ಗಳಲ್ಲಿ | ನಿವೇಶನ ಅಳತೆ ಅಡಿಗಳಲ್ಲಿ | ಪ್ಲಿಂತ್ ಏರಿಯಾ ಚ.ಅಡಿಗಳಲ್ಲಿ | ಅಂದಾಜು ಬೆಲೆ ರೂ.ಗಳಲ್ಲಿ | ವಸತಿ ಸ್ಥಳವಾಕಾಶದ ವಿವರಗಳು |
|---|---|---|---|---|---|---|
| 1 | EWS | ಗರಿಷ್ಠ ರೂ. 17,000/– | 20X30 | 325 | 5.00 ಲಕ್ಷ | 1 ಬೆಡ್ ರೂಮ್, ಹಾಲ್, ಕಿಚನ್ |
| 2 | LIG | ಅರ್ಜಿದಾರರ ಆರ್ಥಿಕ ಸಾಮರ್ಥ್ಯತೆ | 30 X40 | 450 | 9.00 ಲಕ್ಷ | 2 ಬೆಡ್ ರೂಮ್, ಹಾಲ್, ಕಿಚನ್ |
| 3 | MIG | – | 30 X50 | 700 | 11.00 ಲಕ್ಷ | 2 ಬೆಡ್ ರೂಮ್, ಹಾಲ್, ಕಿಚನ್, ಡೈನಿಂಗ್ ಪೂಜಾ ರೂಂ. ಸ್ಟೋರ್ |
| 4 | HIG | – | 40 X60<br>50 X80 | 1000–<br>1200– | 15.00 ಲಕ್ಷ | 3 ಬೆಡ್ ರೂಮ್, ಹಾಲ್, ಕಿಚನ್, ಡೈನಿಂಗ್ ಪೂಜಾ ರೂಂ. ಸ್ಟೋರ್ |

**IV** **ಷರತ್ತು ಮತ್ತು ನಿಬಂಧನೆಗಳು :**

1. ಪ್ರತಿಯೊಂದು ಪ್ರಕರಣಕ್ಕೆ ಸರ್ಕಾರದ ಆಡಳಿತಾತ್ಮಕ ಮಂಜೂರಾತಿಯನ್ನು ಪ್ರತ್ಯೇಕವಾಗಿ ಪಡೆಯತಕ್ಕದ್ದು.
2. ಈ ವಸತಿ ಯೋಜನೆಗಳನ್ನು ಸರ್ಕಾರದ ಹಣಕಾಸಿನ ಸಹಾಯ/ಭದ್ರತೆಯಿಲ್ಲದೆ ಕರ್ನಾಟಕ ಗೃಹ ಮಂಡಳಿ ಕಾಯ್ದೆ–62ರ ಸೆಕ್ಷನ್ 20ರನ್ವಯ ಹಣಕಾಸು ಸಂಸ್ಥೆಗಳಿಂದ ಸಾಲ ಪಡೆದು ಕೈಗೆತ್ತಿ ಕೊಳ್ಳುವುದು.
3. ಕರ್ನಾಟಕ ಗೃಹ ಮಂಡಳಿಯ ಈ ಯೋಜನೆಗಳಿಗೆ ವಾಣಿಜ್ಯ ಬ್ಯಾಂಕುಗಳು/ಹಣಕಾಸು ಸಂಸ್ಥೆಗಳಿಂದ ಪಡೆಯುವ ಸಾಲದಿಂದ ಹಣ ಹೂಡಿಕೆ ಮಾಡುವುದರಿಂದ, ಸರ್ಕಾರದ ಹಣಕಾಸಿನ ಪಾಲ್ಗೊಳುವಿಕೆಯು ಇರುವುದಿಲ್ಲ ಮತ್ತು ಇಂತಹ ಸಾಲಗಳ ಮೇಲೆ ಸರ್ಕಾರದ ಖಾತರಿ ನೀಡುವ ಅಗತ್ಯತೆಯು ಇರುವುದಿಲ್ಲ.
4. ಸಮಾಜದಲ್ಲಿ ಆರ್ಥಿಕವಾಗಿ ಹಿಂದುಳಿದ, ಮತ್ತು ಕಡಿಮೆ ಆದಾಯ ವರ್ಗದ ಜನರು ಸೇರಿದಂತೆ ಒಟ್ಟಾರೆ ಎಲ್ಲಾ ವರ್ಗದ ಜನರಿಗೆ ಸೂಕ್ತವಾದ ವಸತಿಯನ್ನು ಒದಗಿಸುವುದು.
5. ಉತ್ತಮ ರಸ್ತೆ, ನೀರು, ವಿದ್ಯುತ್ ಪೂರೈಕೆ ಮತ್ತು ಸ್ಯಾನಿಟರಿ ಸೌಲಭ್ಯಗಳನ್ನು ಒದಗಿಸತಕ್ಕದ್ದು.
6. ಈ ವಸತಿ ಯೋಜನೆಗಳ ಬಡಾವಣೆಗಳ ವಿನ್ಯಾಸ ತಯಾರಿಕೆ ಮಾನದಂಡಗಳು : ಸ್ಥಳೀಯ CDP/ODP/Master Plan/ವಲಯ ನಿಯಮಾವಳಿಗಳನ್ವಯ ಸಂಬಂಧಪಟ್ಟ ಯೋಜನಾ/ಅಭಿವೃದ್ಧಿ ಪ್ರಾಧಿಕಾರಿಗಳು ಭೂ–ಉಪಯೋಗಕ್ಕೆ ಸಂಬಂಧಿಸಿದಂತೆ ವಿಧಿಸುವ ಷರತ್ತುಗಳಿಗೆ ಅನುರೂಪವಾಗಿರತಕ್ಕದ್ದು.

| ಕ್ರಮ ಸಂಖ್ಯೆ | ಭೂ–ಉಪಯೋಗ | ಒಟ್ಟು ಸ್ಥಳದ ಶೇಕಡವಾರು |
|---|---|---|
| 1 | ವಾಸಕ್ಕೆ | 55 |
| 2 | ವಾಣಿಜ್ಯ | 2–5 |
| 3 | ಸಾರ್ವಜನಿಕ/ಅರೆ ಸಾರ್ವಜನಿಕ | 5–10 |
| 4 | ಉದ್ಯಾನ ಮತ್ತು ಬಯಲು ಪ್ರದೇಶ | 10 |
| 5 | ರಸ್ತೆಗಳು | 25 |

7. ಸೀವೇಜ್ ಟ್ರೀಟ್‌ಮೆಂಟ್ ಮತ್ತು ಪವರ್ ಸಬ್ ಸ್ಟೇಷನ್‌ಗಳು, ಶಾಲೆ ಇತ್ಯಾದಿ ಸಾರ್ವಜನಿಕ ಸೌಕರ್ಯಗಳಿಗೆ ಸಾಕಷ್ಟು ಸ್ಥಳಾವಕಾಶ ನೀಡತಕ್ಕದ್ದು.
8. ವಿಶೇಷ ಗುಣ ಲಕ್ಷಣಗಳು : ಮಳೆ ನೀರು ಸಂಗ್ರಹಣೆ, ಕೆರೆಗಳ ಮರುಪೂರಣ, ಭೂ–ಅಲಂಕಾರೋದ್ಯಾನ ರಚನೆ ಕೈಗೊಳ್ಳುವುದು.

**ಎಸ್. ಚಂದ್ರಶೇಖರಪ್ಪ**
ಸರ್ಕಾರದ ಉಪ ಕಾರ್ಯದರ್ಶಿ,
ವಸತಿ ಇಲಾಖೆ.

ಪಿ.ಆರ್. ನಂ. 2146

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಎಸ್.ಎಂ. ಇಕ್ಬಾಲ್ ಮಿಯಾನ್, ಜಿಲ್ಲಾ ವಿಮಾಧಿಕಾರಿ, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ ಅವರ ಅಮಾನತ್ತನ್ನು ರದ್ದುಪಡಿಸಿ ಮತ್ತೆ ಸೇವೆಗೆ ತೆಗೆದುಕೊಳ್ಳುವ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 41 ಕವಿಇ 2010 ಬೆಂಗಳೂರು, ದಿನಾಂಕ : 30–08–2011**

ಶ್ರೀ ಎಸ್. ಎಂ. ಇಕ್ಬಾಲ್ ಮಿಯಾನ್, ಜಿಲ್ಲಾ ವಿಮಾಧಿಕಾರಿ, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ ಅವರನ್ನು ಸರ್ಕಾರಿ ಆದೇಶ ಸಂಖ್ಯೆ: ಆಇ 41 ಕವಿಇ 2010 ದಿನಾಂಕ: 12–11–2010 ರಂದು ಅಮಾನತ್ತಿನಲ್ಲಿಟ್ಟಿರುವುದರಿಂದಲೂ,

ಶ್ರೀ ಎಸ್.ಎಂ. ಇಕ್ಬಾಲ್ ಮಿಯಾನ್, ಜಿಲ್ಲಾ ವಿಮಾಧಿಕಾರಿ, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ ಅವರ ಅಮಾನತ್ತನ್ನು ರದ್ದುಪಡಿಸಿ ಅವರನ್ನು ಮತ್ತೆ ಸೇವೆಗೆ ತೆಗೆದುಕೊಳ್ಳಬೇಕೆಂದು ಸರ್ಕಾರವು ತೀರ್ಮಾನಿಸಿರುವುದರಿಂದಲೂ,

ಆದ್ದರಿಂದ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(5)(ಸಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಸ್.ಎಂ. ಇಕ್ಬಾಲ್ ಮಿಯಾನ್, ಜಿಲ್ಲಾ ವಿಮಾಧಿಕಾರಿ, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ ಅವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ/ಶಿಸ್ತು ಕ್ರಮವನ್ನು ಬಾಕಿ ಇಟ್ಟು ಅವರ ಅಮಾನತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿ ಈ ಮೂಲಕ ಮತ್ತೆ ಸೇವೆಗೆ ತೆಗೆದುಕೊಳ್ಳುತ್ತದೆ.

ಶ್ರೀ ಎಸ್.ಎಂ. ಇಕ್ಬಾಲ್ ಮಿಯಾನ್, ಜಿಲ್ಲಾ ವಿಮಾಧಿಕಾರಿ, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ ಅವರನ್ನು ಜಿಲ್ಲಾ ವಿಮಾಧಿಕಾರಿ, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಈ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ಶಿವರಾಮ್**

ಪಿ.ಆರ್. 2148

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀಯುತರುಗಳಾದ ಕೆ. ಶಂಕರಯ್ಯ, ಸಿ.ಹೆಚ್.ಸಿ.–55, ಶ್ರೀರಂಗಪಟ್ಟಣ ಪೊಲೀಸ್ ಠಾಣೆ, ಡಿ. ದೇವರಾಜು, ಸಿಪಿಸಿ–327, ಕಿಕ್ಕೇರಿ ಪೊಲೀಸ್ ಠಾಣೆ, ಕೆ. ಕೇಶವ, ಸಿ.ಪಿ.ಸಿ. 497, ಮಂಡ್ಯ (ಗ್ರಾ) ಪೊಲೀಸ್ ಠಾಣೆ, ಕೆ.ಸಿ. ನಟರಾಜು, ಸಿಪಿಸಿ–632 ಮತ್ತು ಟಿ. ಲಿಂಗರಾಜು, ಸಿಪಿಸಿ–24, ಮಂಡ್ಯ ಪಶ್ಚಿಮ ಪೊಲೀಸ್ ಠಾಣೆ, ಇವರುಗಳು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1) ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ (2)/ಡಿಇ/28/2009–10 (ಓ.ಬಿ. ಸಂಖ್ಯೆ: 225/09–10) ದಿನಾಂಕ: 06–11–2009.
2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶಗಳ ಸಂಖ್ಯೆ:
   - i) ಅಪೀಲು (60)/2009–10 (ಓ.ಬಿ. ಸಂಖ್ಯೆ: 01/2010–11) ದಿನಾಂಕ: 23–04–2010
   - ii) ಅಪೀಲು (61)/2009–10 (ಓ.ಬಿ. ಸಂಖ್ಯೆ: 01/2010–11) ದಿನಾಂಕ: 23–04–2010
   - iii) ಅಪೀಲು (62)/2009–10 (ಓ.ಬಿ. ಸಂಖ್ಯೆ: 01/2010–11) ದಿನಾಂಕ: 23–04–2010
   - iv) ಅಪೀಲು (63)/2009–10 (ಓ.ಬಿ. ಸಂಖ್ಯೆ: 01/2010–11) ದಿನಾಂಕ: 23–04–2010
   - v) ಅಪೀಲು (64)/2009–10 (ಓ.ಬಿ. ಸಂಖ್ಯೆ: 01/2010–11) ದಿನಾಂಕ: 23–04–2010
3) ಅರ್ಜಿದಾರರುಗಳ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 18–06–2010.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2)/29/2010–11 ದಿನಾಂಕ: 16–05–2011.
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 66 ಸಿಎನ್‌ಎಸ್ 11 ದಿನಾಂಕ: 11–08–2011.

**ಪ್ರಸ್ತಾವನೆ :**

ಶ್ರೀಯುತರಾದ ಕೆ. ಶಂಕರಯ್ಯ, ಸಿ.ಹೆಚ್.ಸಿ.–55, ಶ್ರೀರಂಗಪಟ್ಟಣ ಪೊಲೀಸ್ ಠಾಣೆ, ಡಿ. ದೇವರಾಜು, ಸಿಪಿಸಿ–327, ಕಿಕ್ಕೇರಿ ಪೊಲೀಸ್ ಠಾಣೆ, ಕೆ. ಕೇಶವ, ಸಿ.ಪಿ.ಸಿ.–497, ಮಂಡ್ಯ (ಗ್ರಾ) ಪೊಲೀಸ್ ಠಾಣೆ, ಕೆ.ಸಿ. ನಟರಾಜು, ಸಿಪಿಸಿ–632 ಮತ್ತು ಟಿ. ಲಿಂಗರಾಜು, ಸಿಪಿಸಿ–24, ಮಂಡ್ಯ ಪಶ್ಚಿಮ ಪೊಲೀಸ್ ಠಾಣೆ, ಇವರುಗಳು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಸರ್ಕಾರಿ ಸೇವೆಯಲ್ಲಿ ಅತೀವ ದುರ್ನಡತೆ ಹಾಗೂ ಅಶಿಸ್ತನ್ನು ಪ್ರದರ್ಶಿಸಿದ ಕಾರಣದ ಮೇಲೆ ಇವರುಗಳ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ 8 ರೀತ್ಯಾ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :**

> "ನೀವುಗಳು ಸ್ವಂತ ಕೆಲಸಕ್ಕೆಂದು ಕಾರಣವನ್ನು ತೋರಿಸಿ ದಿನಾಂಕ 14–03–2009 ರಿಂದ 18–03–2009ರ ವರೆಗೆ ಒಟ್ಟು 5 ದಿನಗಳ ಆಕಸ್ಮಿಕ ರಜೆಯನ್ನು ಡಿ.ವೈ.ಎಸ್.ಪಿ/ಪಿ.ಎಸ್.ಐ. ರವರುಗಳಿಂದ ಮಂಜೂರು ಮಾಡಿಸಿಕೊಂಡು, ನಿಮ್ಮ ರಜೆ ಅರ್ಜಿಯಲ್ಲಿ ರಜೆಗೆ ನಿಖರವಾದ ಕಾರಣವನ್ನು ತಿಳಿಸದೆ, ನೀವುಗಳು ದುಬೈ ದೇಶಕ್ಕೆ ಪ್ರವಾಸ ಹೋಗುತ್ತಿರುವ ವಿಚಾರವನ್ನು ನಿಮ್ಮ ಮೇಲಾಧಿಕಾರಿಗಳಲ್ಲಿ ಮರೆಮಾಚಿ, ಪ್ರಯಾಣದ ಕಾರಣವನ್ನು ಉದ್ದೇಶಪೂರ್ವಕವಾಗಿ ತಿಳಿಸದೆ, ಪ್ರವಾಸಕ್ಕೆ ತಗಲುವ ಖರ್ಚಿನ ವಿವರಗಳನ್ನು, ಸದರಿ ಖರ್ಚಿಗೆ ಕ್ರೋಢೀಕರಿಸಿದ ಹಣದ ಮೂಲವನ್ನು ವಿದೇಶದಲ್ಲಿ ನೋಡಲು ಇಚ್ಛಿಸಿರುವ ಸ್ಥಳಗಳು, ಭೇಟಿ ಮಾಡಲು ಇಚ್ಛಿಸಿರುವ ಬಂಧು ಮಿತ್ರ ವಿಳಾಸ, ವಾಸ್ತವ್ಯ ಮಾಡುವ ಸ್ಥಳ ಮತ್ತು ದೂರವಾಣಿ ಸಂಖ್ಯೆ ಇತ್ಯಾದಿ ವಿವರಗಳನ್ನು ಮಾನ್ಯ ಜಿಲ್ಲಾ ಪೊಲೀಸ್ ಅಧೀಕ್ಷಕರಿಗೆ ಸಲ್ಲಿಸಿಕೊಂಡು, ಮಾನ್ಯ ಎಸ್.ಪಿ., ಮಂಡ್ಯ ರವರ ಪೂರ್ವಾನುಮತಿ ಪಡೆಯದೇ ವಿದೇಶಕ್ಕೆ ಪ್ರಯಾಣಿಸಿ ವಾಸವಾಗಿರುತ್ತೀರಿ. ನೀವುಗಳು ಜವಾಬ್ದಾರಿಯುತ ಪೊಲೀಸ್ ಅಧಿಕಾರಿಗಳಾಗಿದ್ದು, ಸಾಕಷ್ಟು ಕಾನೂನಿನ ಅರಿವಿದ್ದು, ಸೇವಾ ಅನುಭವ ಹೊಂದಿದ್ದು, ಶಿಸ್ತಿನ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವುದನ್ನು ಲೆಕ್ಕಿಸದೆ, ಅತೀವ ದುರ್ನಡತೆ ಹಾಗೂ ಅಶಿಸ್ತನ್ನು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 06–11–2009ರ ಆದೇಶದಲ್ಲಿ ಅರ್ಜಿದಾರರುಗಳ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮೂರು ವರ್ಷಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಮುಂದೂಡಲಾದ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಶಿಸ್ತು/ಪ್ರಾಧಿಕಾರದ ದಂಡನಾದೇಶವನ್ನು ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ: 23–04–2010ರ ಆದೇಶಗಳಲ್ಲಿ ಭಾಗಶಃ ಮಾರ್ಪಡಿಸಿ ಇವರುಗಳ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಎರಡು ವರ್ಷಗಳ ಕಾಲ ನಂತರದ ವೇತನ ಬಡ್ತಿಯ ಮೇಲೆ ಪರಿಣಾಮವಾಗುವಂತೆ ಮುಂದೂಡಲಾಗಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರುಗಳಿಗೆ ವಿಧಿಸಿರುವ ದಂಡನೆಯು ಆರೋಪಕ್ಕೆ ಅನುಗುಣವಾಗಿಲ್ಲವೆಂದು ತೀರ್ಮಾನಿಸಿ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 107 ಪೊಸಿಅ 2010, ಬೆಂಗಳೂರು, ದಿನಾಂಕ : 29ನೇ ಆಗಸ್ಟ್ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀಯುತರುಗಳಾದ ಕೆ. ಶಂಕರಯ್ಯ ಸಿ.ಹೆಚ್.ಸಿ.–55, ಶ್ರೀರಂಗಪಟ್ಟಣ ಪೊಲೀಸ್ ಠಾಣೆ, ಡಿ. ದೇವರಾಜು, ಸಿಪಿಸಿ,–327 ಕಿಕ್ಕೇರಿ ಪೊಲೀಸ್ ಠಾಣೆ, ಕೆ. ಕೇಶವ, ಸಿ.ಪಿ.ಸಿ.–497, ಮಂಡ್ಯ (ಗ್ರಾ) ಪೊಲೀಸ್ ಠಾಣೆ, ಕೆ.ಸಿ. ನಟರಾಜು, ಸಿಪಿಸಿ–632 ಮತ್ತು ಟಿ. ಲಿಂಗರಾಜು, ಸಿಪಿಸಿ–24, ಮಂಡ್ಯ ಪಶ್ಚಿಮ ಪೊಲೀಸ್ ಠಾಣೆ, ಇವರುಗಳಿಗೆ ವಿಧಿಸಿರುವ ದಂಡನಾದೇಶವನ್ನು ಮಾರ್ಪಡಿಸಿ ಇವರುಗಳ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಮುಂದೂಡುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಪಿ.ಆರ್. 2149

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಬಿ.ಟಿ. ಚಿದಾನಂದ ಸ್ವಾಮಿ, ಪಿ.ಐ., ಜ್ಞಾನಭಾರತಿ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ: ಡಿಇ.2/ಸಿಓಪಿ/248/ಆರ್–7/2009 ದಿನಾಂಕ: 02–02–2010
2) ಮೇಲ್ಮನವಿ ಪ್ರಾಧಿಕಾರ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು, ಇವರ ಆದೇಶ ಸಂಖ್ಯೆ: ಸಿಬಿ(8)/09/2010–11 ದಿನಾಂಕ: 25–09–2010
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 20–11–2010
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ (8)/09/2010–11 ದಿನಾಂಕ: 04–02–2011
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 81 ಸಿಎನ್‌ಎಸ್ 11 ದಿನಾಂಕ: 11–08–2011.

**ಪ್ರಸ್ತಾವನೆ :**

ಶ್ರೀ ಬಿ.ಟಿ. ಚಿದಾನಂದ ಸ್ವಾಮಿ, ಪಿ.ಐ., ಇವರು ಬೆಂಗಳೂರಿನ ಜ್ಞಾನಭಾರತಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ, ಬೇಜವಾಬ್ದಾರಿತನ ಹಾಗೂ ಕರ್ತವ್ಯ ಲೋಪವೆಸಗಿರುವ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :**

ಶ್ರೀ ಬಿ.ಟಿ. ಚಿದಾನಂದ ಸ್ವಾಮಿ, ಪಿ.ಐ., ಜ್ಞಾನಭಾರತಿ ಪೊಲೀಸ್ ಠಾಣೆ, ಬೆಂಗಳೂರು ನಗರ ಇಲ್ಲಿ ಠಾಣಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ಅರ್ಜಿದಾರರಾದ ಶ್ರೀ ಚಿಕ್ಕಮುದ್ದಯ್ಯ ರವರು ದಿನಾಂಕ: 13–10–2009 ರಂದು ಪಿ.ಎಸ್.ಐ. ಆಯ್ಕೆ ಪರೀಕ್ಷೆಯ ಪ್ರಶ್ನೆ ಪತ್ರಿಕೆ ಬಯಲಾದ ಬಗ್ಗೆ ದೂರು ನೀಡುವ ಸಮಯದಲ್ಲಿ ರಜೆಯಲ್ಲಿದ್ದು, ದಿನಾಂಕ: 14–10–2009 ರಂದು ರಜೆಯಿಂದ ಕರ್ತವ್ಯಕ್ಕೆ ಬಂದ ನಂತರ ಠಾಣೆಯ ಎಲ್ಲಾ ಆಗುಹೋಗುಗಳನ್ನು ತಿಳಿದುಕೊಳ್ಳಬೇಕಾಗಿತ್ತು ಆ ರೀತಿ ತಿಳಿದುಕೊಳ್ಳದೇ ಇದ್ದು, ದಿನಾಂಕ: 18–10–2009 ರಂದು ಶ್ರೀ ಚಿಕ್ಕಮುದ್ದಯ್ಯ ರವರು ತನ್ನ ದೂರಿನ ಬಗ್ಗೆ ಪ್ರಕರಣ ದಾಖಲಿಸಬೇಕೆಂದು ಒತ್ತಾಯ ಮಾಡಿದ್ದರಿಂದ ಪಿ.ಎಸ್.ಐ. ರವರಿಗೆ ನಿರ್ದೇಶನ ನೀಡಿ ಮೊ.ಸಂ. 294/2009 ಕಲಂ 506 ಐ.ಪಿ.ಸಿ. ಪ್ರಕಾರ ದಾಖಲು ಮಾಡಿರುತ್ತೀರಿ. ಈ ರೀತಿ

ಒಬ್ಬ ಜವಾಬ್ದಾರಿಯುತ ಠಾಣಾಧಿಕಾರಿಯಾದ ನೀವು ರಜೆಯಿಂದ ಬಂದ ನಂತರ ಠಾಣೆಯ ಆಗು ಹೋಗುಗಳನ್ನು ತಿಳಿದುಕೊಳ್ಳದೇ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ, ಬೇಜವಾಬ್ದಾರಿತನ ಹಾಗೂ ಕರ್ತವ್ಯಲೋಪವೆಸಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 02–02–2010ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಒಂದು ವರ್ಷ ಕಾಲ ಮುಂದೂಡಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ: 25–09–2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರ ವಿರುದ್ಧದ ಆರೋಪವನ್ನು ಗಮನಿಸಿದಲ್ಲಿ ವಿಧಿಸಿರುವ ದಂಡನೆಯು ಅಧಿಕವೆಂದು ಪರಿಗಣಿಸಿ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 180 ಪೊಸಿಅ 2010, ಬೆಂಗಳೂರು, ದಿನಾಂಕ : 27ನೇ ಆಗಸ್ಟ್ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ.ಟಿ. ಚಿದಾನಂದ ಸ್ವಾಮಿ, ಪಿ.ಐ., ಜ್ಞಾನಭಾರತಿ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರಿಗೆ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನಾದೇಶವನ್ನು ಮಾರ್ಪಡಿಸಿ "ವಾಗ್ದಂಡನೆ" ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಪಿ.ಆರ್. 2150

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಅರವಿಂದ ಎಸ್. ಮಂಗಾಣಿ, ಅಬಕಾರಿ ಉಪ ಆಯುಕ್ತರು, ತುಮಕೂರು ಜಿಲ್ಲೆ, ತುಮಕೂರು ರವರನ್ನು ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ :**

1) ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ : ಲೋಕ್ / ಐಎನ್‌ವಿ(ಜಿ) / ಬಿಡಿ–43/ ಸಿಆರ್– 08/2011 / ತುಮಕೂರು ದಿನಾಂಕ: 28–07–2011.
2) ಅಬಕಾರಿ ಆಯುಕ್ತರ ಪತ್ರ ಸಂಖ್ಯೆ: ಇಸಿಇ/ಬಿಎನ್‌ಜಿ/07/ಡಿಎಸ್‌ಸಿ(1)/ 2011 ದಿನಾಂಕ: 16–08–2011.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ನರಸೇಗೌಡ, ಕ್ಯಾಷಿಯರ್, ಕಿಂಗ್ಸ್ ಕಾಟೇಜ್ ಬಾರ್ ಅಂಡ್ ರೆಸ್ಟೋರೆಂಟ್, ಸತ್ಯಮಂಗಲ, ತುಮಕೂರುರವರು ಲೋಕಾಯುಕ್ತ ಪೊಲೀಸ್ ಠಾಣೆಗೆ ದೂರು ದಾಖಲಿಸಿದ್ದು, ಸದರಿ ದೂರಿನಲ್ಲಿ ಶ್ರೀ ಅರವಿಂದ ಎಸ್. ಮಂಗಾಣಿ ರವರು ಸದರಿ ಬಾರ್ ಅಂಡ್ ರೆಸ್ಟೋರೆಂಟಿನ ವಿರುದ್ಧ ಹಾಕಿದ್ದ ಕೇಸನ್ನು ಮುಕ್ತಾಯ ಮಾಡದೇ ಹಾಗೇ ಇಟ್ಟಿದ್ದು, ಇದೇ ಕಾರಣವನ್ನು ಮುಂದೆ ಮಾಡಿಕೊಂಡು ಸದರಿ ಪ್ರಕರಣವನ್ನು ಮುಕ್ತಾಯ ಮಾಡಲು ಈಗಾಗಲೇ ರೂ. 60,000/– ಗಳನ್ನು ಪಡೆದಿದ್ದರೂ ಸಹ ಮತ್ತೆ ರೂ. 50,000/– ಗಳನ್ನು ಲಂಚವಾಗಿ ಕೊಡಬೇಕೆಂದು, ಕೊಡದಿದ್ದಲ್ಲಿ ಸದರಿ ಬಾರ್‌ನ ಲೈಸೆನ್ಸ್‌ನ್ನು ನವೀಕರಿಸಲಾಗುವುದಿಲ್ಲವೆಂದು ಅಬಕಾರಿ ಉಪ ಆಯುಕ್ತರು ತಿಳಿಸಿರುತ್ತಾರೆಂದು ದೂರು ಕೊಟ್ಟಿರುತ್ತಾರೆ. ದೂರು ಅರ್ಜಿಯನ್ನು ಪೊಲೀಸ್ ಉಪಾಧೀಕ್ಷಕರು, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ತುಮಕೂರು ರವರು ಆರೋಪಿ ಸರ್ಕಾರಿ ನೌಕರರ ವಿರುದ್ಧ ದಿನಾಂಕ: 30–06–2011 ರಂದು ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ: 8/2011 ರಲ್ಲಿ ಪ್ರಕರಣವನ್ನು ದಾಖಲು ಮಾಡಿಕೊಂಡು ತನಿಖೆಯನ್ನು ಕೈಗೊಂಡಿದ್ದು, ತನಿಖಾಧಿಕಾರಿ ಮತ್ತು ಅವರ ಸಿಬ್ಬಂದಿ ವರ್ಗದವರು ದಿನಾಂಕ: 01–07–2011 ರಂದು ಬೀಸಿದ ಬಲೆಯು ಯಶಸ್ವಿಯಾಗಿರುತ್ತದೆಂದು, ಶ್ರೀ ಅರವಿಂದ ಎಸ್. ಮಂಗಾಣಿ, ಅಬಕಾರಿ ಉಪ ಆಯುಕ್ತರು ಇವರ ವಾಹನ ಚಾಲಕ ಶ್ರೀ ಟಿ.ಪಿ. ಚೇತನ್, ಫಿರ್ಯಾದುದಾರರಿಂದ ರೂ. 50,000/– ಲಂಚ ಪಡೆಯುತ್ತಿದ್ದಾಗ ಸಿಕ್ಕಿಬಿದ್ದಿರುತ್ತಾರೆಂದು ವರದಿ ಮಾಡುತ್ತಾ, ಆರೋಪವು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಪ್ರಕರಣದ ಸುಗಮ ತನಿಖೆಗೆ ಅಡ್ಡಿ ಉಂಟು ಮಾಡುವ ಅಥವಾ ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಹಾಗೂ ಸಾಕ್ಷಿ ಪುರಾವೆಗಳನ್ನು ನಾಶಗೊಳಿಸುವ ಸಾಧ್ಯತೆಗಳಿರುವುದರಿಂದ, ಇವರನ್ನು ಕೂಡಲೇ ಅಮಾನತ್ತಿನಲ್ಲಿಡಬೇಕೆಂದು ಹಾಗೂ ಅವರ ಲೀನ್ (ಸ್ಥಾನ) ಅನ್ನು ಬೇರೆ ಕಡೆಗೆ ವರ್ಗಾಯಿಸಲು ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಸರ್ಕಾರನ್ನು ಕೋರಿದ್ದಾರೆ.

ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಅಬಕಾರಿ ಆಯುಕ್ತರು, ಶ್ರೀ ಅರವಿಂದ ಎಸ್. ಮಂಗಾಣಿ, ಅಬಕಾರಿ ಉಪ ಆಯುಕ್ತರು, ತುಮಕೂರು ಜಿಲ್ಲೆ ರವರು ತುಮಕೂರು ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ: 12/2011 ರ ಪ್ರಕರಣದಲ್ಲಿ ಆರೋಪಿತರಾಗಿರುವ ಹಿನ್ನೆಲೆಯಲ್ಲಿ ಅವರನ್ನು ದಿನಾಂಕ: 12–08–2011 ರಂದು ಬೆಳಿಗ್ಗೆ 10.15 ಗಂಟೆಗೆ ದಸ್ತಗಿರಿ ಮಾಡಲಾಗಿ ಅಪರಾಹ್ನ ತುಮಕೂರಿನ 2ನೇ ಅಪರ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ಮುಂದೆ ಹಾಜರುಪಡಿಸಿದ್ದು, ಸದರಿ ಅಧಿಕಾರಿಗಳ ಪರವಾಗಿ ಸಲ್ಲಿಸಿದ್ದ ಜಾಮೀನು ಅರ್ಜಿಯನ್ನು ನ್ಯಾಯಾಧೀಶರು ತಿರಸ್ಕರಿಸಿ ಅವರನ್ನು ನ್ಯಾಯಾಂಗ ಬಂಧನಕ್ಕೆ ಒಳಪಡಿಸಿರುವುದರಿಂದ, ಇವರನ್ನು ನಿಯಮಾನುಸಾರ ಅಮಾನತ್ತಿನಲ್ಲಿಟ್ಟು ಅವರ ಲೀನ್‌ನ್ನು ಕೋಲಾರ ಜಿಲ್ಲೆಗೆ ವರ್ಗಾಯಿಸುವಂತೆ ಕೋರಿರುತ್ತಾರೆ.

ಶ್ರೀ ಅರವಿಂದ ಎಸ್. ಮಂಗಾಣಿ, ಅಬಕಾರಿ ಉಪ ಆಯುಕ್ತರು, ತುಮಕೂರು ಜಿಲ್ಲೆ, ತುಮಕೂರು ಇವರ ವಿರುದ್ಧ ಕರ್ನಾಟಕ ಲೋಕಾಯುಕ್ತ, ತುಮಕೂರು ಜಿಲ್ಲೆ, ತುಮಕೂರು ರವರು ಲೋಕಾಯುಕ್ತ ಪೊಲೀಸ್ ಠಾಣೆ ಗುನ್ನೆ ಸಂಖ್ಯೆ: 12/2011 ರಂದು ದಾಖಲು ಮಾಡಿ

ದಿನಾಂಕ: 12-08-2011 ರಂದು ದಸ್ತಗಿರಿ ಮಾಡಿ ತುಮಕೂರಿನ 2ನೇ ಅಪರ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ಮುಂದೆ ಹಾಜರುಪಡಿಸಿದ್ದು, ಸದರಿ ಅಧಿಕಾರಿಗಳ ಪರವಾಗಿ ಸಲ್ಲಿಸಿದ್ದ ಜಾಮೀನು ಅರ್ಜಿಯನ್ನು ನ್ಯಾಯಾಧೀಶರು ತಿರಸ್ಕರಿಸಿ ನ್ಯಾಯಾಂಗ ಬಂಧನಕ್ಕೆ ಒಳಪಡಿಸಿರುವುದರಿಂದ, ಮಾನ್ಯ ನ್ಯಾಯಾಲಯದ ಆದೇಶದನ್ವಯ ಸದರಿ ಅಧಿಕಾರಿಯವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10 (2) (ಎ) ರನ್ವಯ ದಿನಾಂಕ: 12-08-2011 ರಿಂದ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತುಗೊಳಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 87 ಇಪಿಎಸ್ 2011, ಬೆಂಗಳೂರು, ದಿನಾಂಕ : 22ನೇ ಆಗಸ್ಟ್ 2011.**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(2)(ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಇವರ ವಿರುದ್ಧ ದಾಖಲಾಗಿರುವ ಕ್ರಿಮಿನಲ್ ಮೊಕದ್ದಮೆಯಲ್ಲಿನ ಮುಂದಿನ ತನಿಖೆ/ವಿಚಾರಣೆಯನ್ನು ಕಾಯ್ದಿರಿಸಿ, ಶ್ರೀ ಅರವಿಂದ ಎಸ್. ಮಂಗಾಣಿ, ಅಬಕಾರಿ ಉಪ ಆಯುಕ್ತರು, ತುಮಕೂರು ಜಿಲ್ಲೆ, ತುಮಕೂರು ಇವರನ್ನು ದಿನಾಂಕ: 12-08-2011 ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತಿನಲ್ಲಿರಿಸಿದೆ ಹಾಗೂ ಸದರಿಯವರ ಲೀನ್ ಅನ್ನು ಕೋಲಾರ ಜಿಲ್ಲೆಗೆ ವರ್ಗಾಯಿಸಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಅರವಿಂದ ಎಸ್. ಮಂಗಾಣಿ, ಅಬಕಾರಿ ಉಪ ಆಯುಕ್ತರು, ತುಮಕೂರು ಜಿಲ್ಲೆ, ತುಮಕೂರು ರವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98 ರಂತೆ ಲಭ್ಯವಿರುವ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ.

ಈ ಅಮಾನತ್ತಿನ ಅವಧಿಯಲ್ಲಿ ಇವರು ಸಕ್ಷಮ ಪ್ರಾಧಿಕಾರದ ಅನುಮತಿ ಪಡೆಯದೇ ಕೇಂದ್ರಸ್ಥಾನ ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ.ವಿ. ರಾಮಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಅಬಕಾರಿ)

ಪಿ.ಆರ್. 2151

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಇಲಾಖಾ ಮುಂಬಡ್ತಿ ಸಮಿತಿಗಳ ರಚನೆ – ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಸದಸ್ಯರ ನೇಮಕದ ಬಗ್ಗೆ.

**ಓದಲಾಗಿದೆ :**
1) ದಿನಾಂಕ 09-10-1985ರ ಅಧಿಕೃತ ಜ್ಞಾಪನ ಸಂಖ್ಯೆ: ಡಿಪಿಎಆರ್ 5 ಎಸ್ಆರ್ಸಿ 1984.
2) ದಿನಾಂಕ 06-12-1996ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 64 ಸೆನೆನಿ 1996.
3) ದಿನಾಂಕ 11-02-2010ರ ಅಧಿಸೂಚನೆ ಸಂಖ್ಯೆ: ಸಿಆಸುಇ 46 ಸೇಇವಿ 2008.
4) ದಿನಾಂಕ 19-05-2010ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 75 ಸೆನೆನಿ 2010.
5) ದಿನಾಂಕ 31-08-2010ರ ಸುತ್ತೋಲೆ ಸಂಖ್ಯೆ: ಸಕಇ 134 ಎಸ್ಎಡಿ 2010(4).

**ಪ್ರಸ್ತಾವನೆ :**

ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ದಿನಾಂಕ 09-10-1985ರ ಅಧಿಕೃತ ಜ್ಞಾಪನದಲ್ಲಿ ರಾಜ್ಯ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳಿಗೆ ಜೇಷ್ಠತೆ ಮತ್ತು ಅರ್ಹತೆ ಆಧಾರದ ಮೇಲೆ ಮುಂಬಡ್ತಿಯನ್ನು ನೀಡುವ ಉದ್ದೇಶಕ್ಕಾಗಿ ಇಲಾಖಾ ಮುಂಬಡ್ತಿ ಸಮಿತಿಗಳನ್ನು ರಚಿಸಲಾಗಿತ್ತು.

ಕ್ರ.ಸಂ. (2)ರಲ್ಲಿ ಓದಲಾದ ದಿನಾಂಕ 06-12-1996ರ ಸರ್ಕಾರಿ ಆದೇಶದಲ್ಲಿ ಇಲಾಖಾ ಮುಂಬಡ್ತಿ ಸಮಿತಿಗಳನ್ನು ಪುನರ್ ರಚಿಸಲಾಗಿರುತ್ತದೆ.

ಕ್ರ.ಸಂ. (3)ರಲ್ಲಿ ಓದಲಾದ ದಿನಾಂಕ 11-02-2010ರ ಅಧಿಸೂಚನೆಯಲ್ಲಿ ಸಮೂಹ-ಬಿ ಹುದ್ದೆಗಳಿಗೆ (ತಹಶೀಲ್ದಾರ್ ಗ್ರೇಡ್-2ನ್ನು ಬಿಟ್ಟು) ಸಂಬಂಧಿಸಿದ ಇಲಾಖಾ ಮುಖ್ಯಸ್ಥರನ್ನು ನೇಮಕಾತಿ ಪ್ರಾಧಿಕಾರವೆಂದು ಘೋಷಿಸಲಾಗಿದೆ. ಈ ಹಿನ್ನೆಲೆಯಲ್ಲಿ ದಿನಾಂಕ 06-02-1996ರ ಸರ್ಕಾರಿ ಆದೇಶವನ್ನು ಭಾಗಶಃ ಮಾರ್ಪಡಿಸಿ ಮೇಲೆ ಕ್ರ.ಸಂ. (4)ರಲ್ಲಿ ಓದಲಾದ ಆದೇಶದಲ್ಲಿ ಇಲಾಖಾ ಮುಂಬಡ್ತಿ ಸಮಿತಿಗಳನ್ನು ಪುನರ್‌ರಚಿಸಲಾಗಿದೆ.

ಕ್ರ.ಸಂ. (5)ರಲ್ಲಿ ಓದಲಾದ ದಿನಾಂಕ 31-08-2010ರ ಸಮಾಜ ಕಲ್ಯಾಣ ಇಲಾಖೆಯ ಸುತ್ತೋಲೆಯಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಕ್ಕೆ ಸೇರಿದ ಒಬ್ಬ ಅಧಿಕಾರಿಯನ್ನು ಇಲಾಖಾ ಮುಂಬಡ್ತಿ ಸಮಿತಿಗಳಲ್ಲಿ ನೇಮಿಸಲು ಸೂಚನೆಗಳನ್ನು ನೀಡಿರುತ್ತದೆ. ಈ ಹಿನ್ನೆಲೆಯಲ್ಲಿ, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 18 ಸೆನೆನಿ 2011, ಬೆಂಗಳೂರು, ದಿನಾಂಕ : 29ನೇ ಆಗಸ್ಟ್ 2011.**

ದಿನಾಂಕ 19-05-2010ರ ಸರ್ಕಾರಿ ಆದೇಶವನ್ನು ಭಾಗಶಃ ಮಾರ್ಪಡಿಸಿ ಜೇಷ್ಠತೆ ಹಾಗೂ ಅರ್ಹತೆಯ ಆಧಾರದ ಮೇಲೆ ರಾಜ್ಯ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳಿಗೆ ಮುಂಬಡ್ತಿಯನ್ನು ಪರಿಗಣಿಸುವ ಉದ್ದೇಶಕ್ಕಾಗಿ ರಚಿಸಲಾದ ಇಲಾಖಾ ಮುಂಬಡ್ತಿ ಸಮಿತಿಗಳಲ್ಲಿ ಅದೇ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಕ್ಕೆ ಸೇರಿದ ಒಬ್ಬ ಅಧಿಕಾರಿಯನ್ನು ಸದಸ್ಯರನ್ನಾಗಿ ಸಂಬಂಧಿತ ಇಲಾಖಾ ಮುಖ್ಯಸ್ಥರು ನೇಮಕ ಮಾಡತಕ್ಕದ್ದು. ಅಂತಹ ಅಧಿಕಾರಿಯು, ಯಾವ ಹುದ್ದೆಗೆ ಮುಂಬಡ್ತಿಯನ್ನು ಪರಿಗಣಿಸಲಾಗುತ್ತದೆಯೋ ಆ ಹುದ್ದೆಗೆ ಸಮಾನವಾದ ಹುದ್ದೆಯನ್ನು ಅಥವಾ ಆ ಹುದ್ದೆಗಿಂತ ಮೇಲ್ಪಟ್ಟದ ಹುದ್ದೆಯನ್ನು ಧಾರಣ ಮಾಡಿರಬೇಕು. ಈ ಷರತ್ತನ್ನು ಪೂರೈಸುವ ಅಧಿಕಾರಿಯು ಅದೇ ಇಲಾಖೆಯಲ್ಲಿರದಿದ್ದಲ್ಲಿ, ಈ ಷರತ್ತನ್ನು ಪೂರೈಸುವ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಕ್ಕೆ ಸೇರಿದ ಅಧಿಕಾರಿಯ ಹೆಸರನ್ನು ಸೂಚಿಸುವಂತೆ ಆಡಳಿತ ಇಲಾಖೆಗಳು ಪ್ರಧಾನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ ಅವರನ್ನು ಕೋರತಕ್ಕದ್ದು.

ಇದೇ ವಿಧಾನವನ್ನು ಆಯ್ಕೆ ಮೂಲಕ ಮುಂಬಡ್ತಿ ನೀಡಲು ರಚಿಸಲಾಗಿರುವ ಇಲಾಖಾ ಮುಂಬಡ್ತಿ ಸಮಿತಿಗಳಿಗೂ ಅನ್ವಯಿಸತಕ್ಕದ್ದೆಂದು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
ದೇವರಾಜು
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು-1)

ಪಿ.ಆರ್. 2152

**ವಸತಿ ಸಚಿವಾಲಯ**

**ವಿಷಯ :** ಕರ್ನಾಟಕ ಗೃಹ ಮಂಡಳಿಯು ಖಾಸಗಿಯವರ ಸಹಭಾಗಿತ್ವದಲ್ಲಿ ವಸತಿ ಯೋಜನೆಯನ್ನು ಹಮ್ಮಿಕೊಳ್ಳಲು ಮಾರ್ಗಸೂಚಿಗಳ ರಚನೆ ಹಾಗೂ ಪರಿಷ್ಕರಣೆ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ವಇ/124/ಕೆಹೆಚ್‌ಬಿ/2001 ದಿನಾಂಕ: 15–05–2001 ಮತ್ತು 03–09–2002.
2. ಸೇರ್ಪಡೆ ಆದೇಶ ಸಂಖ್ಯೆ: ವಇ 246 ಕಗೃಮಂ 2002, ದಿನಾಂಕ: 10–06–2003.

**ಪ್ರಸ್ತಾವನೆ:**

ಕರ್ನಾಟಕ ಗೃಹ ಮಂಡಳಿಯು ಖಾಸಗಿಯವರ ಜಮೀನಿನಲ್ಲಿ ವಸತಿ ಯೋಜನೆಗಳನ್ನು ಕೈಗೊಳ್ಳಲು ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ದಿನಾಂಕ: 15–05–2001ರ ಸರ್ಕಾರಿ ಆದೇಶದಲ್ಲಿ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿತ್ತು. ಸದರಿ ಯೋಜನೆಯನ್ನು ಕಾರ್ಯರೂಪಕ್ಕೆ ತರುವ ಹಂತದಲ್ಲಿ ಕರ್ನಾಟಕ ಗೃಹ ಮಂಡಳಿಯ ಆಯುಕ್ತರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಸದರಿ ಯೋಜನೆಗಳು ಪೂರ್ಣ ಪ್ರಮಾಣದಲ್ಲಿ ಯಶಸ್ವಿಯಾಗಲು, ಕರ್ನಾಟಕ ಗೃಹ ಮಂಡಳಿಯು ಪಡೆಯುವ ಜಮೀನಿಗೆ ನೋಂದಣಿ ಶುಲ್ಕ ವಿನಾಯ್ತಿ ನೀಡುವಂತೆ ಕೋರಿದ್ದರು. ಸದರಿ ಪ್ರಸ್ತಾವನೆಯನ್ನು ವಿಸ್ತೃತವಾಗಿ ಪರಿಶೀಲಿಸಿದ ನಂತರ ಮೇಲೆ ಓದಲಾದ ಕ್ರಮಾಂಕ (1)ರಲ್ಲಿನ ದಿನಾಂಕ: 15–05–2001ರ ಸರ್ಕಾರಿ ಆದೇಶದಲ್ಲಿನ ಮಾರ್ಗಸೂಚಿಗಳನ್ನು ರದ್ದುಪಡಿಸಿ, ದಿನಾಂಕ: 3–9–2002ರ ಸರ್ಕಾರಿ ಆದೇಶದಲ್ಲಿ ಹೊಸದಾಗಿ ಮಾರ್ಗಸೂಚಿಗಳನ್ನು ಹೊರಡಿಸಲಾಗಿತ್ತು. ಸಾರ್ವಜನಿಕ ಕ್ಷೇತ್ರದ ಜಮೀನುಗಳಲ್ಲಿ ಖಾಸಗಿ ಅಭಿವೃದ್ಧಿದಾರರೊಂದಿಗೆ ವಸತಿ ಯೋಜನೆಗಳನ್ನು ಕೈಗೊಳ್ಳುವ ಬಗ್ಗೆ ಮತ್ತು ರೋಗಗ್ರಸ್ಥ ಉದ್ದಿಮೆಗಳ ಜಾಗದಲ್ಲಿ ವಸತಿ ಯೋಜನೆಗಳನ್ನು ಕೈಗೊಳ್ಳಲು ಹಾಗೂ ಇತರೆ ಪೂರಕ ವಿಷಯಗಳನ್ನು ಸದರಿ ಮಾರ್ಗಸೂಚಿಗಳಿಗೆ ಸೇರ್ಪಡೆ ಮಾಡುವ ಬಗ್ಗೆ ಕರ್ನಾಟಕ ಗೃಹ ಮಂಡಳಿಯ ದಿನಾಂಕ: 5–9–2002ರ 372ನೇ ಮಂಡಳಿ ಸಭೆಯಲ್ಲಿ ಚರ್ಚಿಸಿ, ಸರ್ಕಾರಕ್ಕೆ ಒಂದು ಪ್ರಸ್ತಾವನೆಯನ್ನು ಸಲ್ಲಿಸಲು ನಿರ್ಣಯಿಸಿದ ಹಿನ್ನೆಲೆಯಲ್ಲಿ, ದಿನಾಂಕ: 1–4–2003ರ ಪತ್ರದಲ್ಲಿ ಕರ್ನಾಟಕ ಗೃಹ ಮಂಡಳಿಯ ಆಯುಕ್ತರು ಪ್ರಸ್ತಾವನೆ ಸಲ್ಲಿಸಿ, ಈಗಾಗಲೇ ರೂಪಿಸಿರುವ ಮಾರ್ಗಸೂಚಿಗಳಿಗೆ ಸೇರ್ಪಡೆ ಮಾಡಲು ಕೋರಿದ್ದರು. ಸದರಿ ಪ್ರಸ್ತಾವನೆಯನ್ನು ವಿವರವಾಗಿ ಪರಿಶೀಲಿಸಿದ ನಂತರ ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ದಿನಾಂಕ: 10–6–2003ರ ಸೇರ್ಪಡೆ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ಗೃಹ ಮಂಡಳಿಯು ಖಾಸತಿ ಸಹಭಾಗಿತ್ವದಲ್ಲಿ ವಸತಿ ಯೋಜನೆಗಳನ್ನು ಕಾರ್ಯರೂಪಕ್ಕೆ ತರುವ ಹಂತದಲ್ಲಿ, ಮಂಡಳಿಯ ಅನುಭವಕ್ಕೆ ಕಂಡುಬಂದ ಅಂಶಗಳು ಹಾಗೂ ಖಾಸಗಿ ಅಭಿವೃದ್ಧಿದಾರರ ಕೋರಿಕೆಯ ಹಿನ್ನೆಲೆಯಲ್ಲಿ, ಖಾಸಗಿ ಸಹಭಾಗಿತ್ವದ ವಸತಿ ಯೋಜನೆಗಳಿಗೆ ಉತ್ತೇಜನ ನೀಡುವ ದೃಷ್ಟಿಯಿಂದ ಮೇಲೆ ತಿಳಿಸಲಾದ ಮಾರ್ಗಸೂಚಿಗಳಿಗೆ, ಭೂ–ಪರಿವರ್ತನೆ, ಭೂ–ಉಪಯೋಗದ ಬದಲಾವಣೆ, ಖರಾಬು ಜಮೀನುಗಳ ವರ್ಗಾವಣೆ, ಸಾಲ ಪಡೆಯುವ ಕಲಂ (clause) ಮಾರಾಟ ಮಾಡುವ ಶುಲ್ಕ, ಸದರಿ ಜಮೀನಿನಲ್ಲಿ ಯೋಜನೆಗಳನ್ನು ಪೂರ್ಣಗೊಳಿಸಿದ ನಂತರ, ಮತ್ತು ಬಡಾವಣೆಯನ್ನು ಸ್ಥಳೀಯ ಸಂಸ್ಥೆಗಳಿಗೆ ವಹಿಸಿಕೊಟ್ಟ ನಿರ್ವಹಣಾ ಶುಲ್ಕ ಮತ್ತು ಇತರೆ ವಿಷಯಗಳನ್ನೊಳಗೊಂಡಂತೆ ಕೆಲವು ಸೇರ್ಪಡೆ ಹಾಗೂ ತಿದ್ದುಪಡಿಗಳನ್ನು ತರಲು ಮರುಪರಿಶೀಲಿಸುವುದು ಎಂಬ ಅಭಿಪ್ರಾಯವನ್ನು ಕರ್ನಾಟಕ ಗೃಹ ಮಂಡಳಿಯು ವ್ಯಕ್ತಪಡಿಸಿದ ಹಿನ್ನೆಲೆಯಲ್ಲಿ ಆ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ವಇ 233 ಕಗೃಮಂ 2008 ಬೆಂಗಳೂರು, ದಿನಾಂಕ: 20–05–2011**

ಮೇಲಿನ ಪ್ರಸ್ತಾವನೆಯ ಹಿನ್ನೆಲೆಯಲ್ಲಿ, ಕರ್ನಾಟಕ ಗೃಹ ಮಂಡಳಿಯು ಖಾಸಗಿ ಸಹಭಾಗಿತ್ವದಲ್ಲಿ ವಸತಿ ಯೋಜನೆಯನ್ನು ಕೈಗೊಳ್ಳಲು ಈ ಆದೇಶದ ಅನುಬಂಧದಲ್ಲಿ ತಿಳಿಸಿರುವಂತೆ ಒಡಂಬಡಿಕೆ ಪತ್ರವನ್ನು ಮಾಡಿಕೊಳ್ಳತಕ್ಕದ್ದು.

ಕರ್ನಾಟಕ ಗೃಹ ಮಂಡಳಿಯಲ್ಲಿ ಖಾಸಗಿ ಸಹಭಾಗಿತ್ವದ ವಸತಿ ಯೋಜನೆಗಳು ಇನ್ನೂ ಪ್ರಾರಂಭಿಕ ಹಂತದಲ್ಲಿರುವುದರಿಂದ ಈಗಾಗಲೇ ಚಾಲ್ತಿಯಲ್ಲಿರುವ ಒಪ್ಪಂದ ಪತ್ರದನ್ವಯ ಒಪ್ಪಂದ ಮಾಡಿಕೊಂಡಿರುವ ಖಾಸಗಿ ಅಭಿವೃದ್ಧಿದಾರರೊಡನೆ ಪರಿಷ್ಕೃತ ಒಪ್ಪಂದ ಮಾಡಿಕೊಳ್ಳಲು ಅಥವಾ Borrowing clause, Marketing fee, Sharing of property and allotment process, Escrow account and Terms of payment, Property maintenance fee after virtual completion of the project and handing over of the colony to the Local Body ಅಥವಾ Supplementary agreement ಇನ್ನಿತರ ಕರಾರುಗಳಿಗೆ ಸಂಬಂಧಿಸಿದಂತೆ, supplementary agreement/ addendum ಮಾಡಿಕೊಳ್ಳಲು ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಪಾರ್ವತಿ**
ಪೀಠಾಧಿಕಾರಿ–3, ವಸತಿ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ವಇ 233 ಕಗೃಮಂ 2008, ದಿನಾಂಕ: 20–05–2011 ಕ್ಕೆ**

**ಅನುಬಂಧ**

**MEMORANDUM OF JOINT VENTURE AGREEMENT**

This MEMORANDUM OF JOINT VENTURE AGREEMENT made on this …………..………………… day of ……………………………. 2010, at Bangalore,

**By and Between**

Karnataka Housing Board (KHB) a body constituted under the provisions of the Karnataka Housing Board Act, 1962, having its principal/registered Office at KHB Complex, Cauvery Bhavan, K.G. Road, Bangalore-560 009. (hereinafter referred to as the "KHB" which expression shall unless repugnant to the context or meaning thereof includes his successors and assigns) and represented herein by the Housing Commissioner of the ONE PART,

AND

……………………………..……….., a company incorporated under the Indian Companies Act 1956, …………………………… having its registered Office at …………………………………

OR

M/s…………………………………………………., a Partnership Firm registered with the Registrar of Firms, having its registered office at ………………………………………… represented by its Managing Partner Mr. ………………………………………………………..

OR

Mr ………………………………………………….., S/o ………………………………….. aged ……… years, residing at ………………………………………………………………………………………… .

(hereinafter referred to as 'Developer' which expression shall mean and include his heirs, its successors in office, executors and administrators) of the OTHER PART.

WHEREAS

A. The Government of Karnataka vide its Order No. DOH/193/KHB/2003 dated: 25-11-2005 (Annexure-B) has evolved a policy to enter into Joint Venture Agreements and arrangements with private developers to make available housing sites, services and fully constructed apartment/houses, and commercial premises;

B. The Developer has submitted a proposal to the KHB to enter into a joint venture agreement to develop …………… Acres of contiguous land to form residential sites and construction of dwelling houses of different dimensions located at -

……………………………… in ………………….. (which are more fully described in Schedule "A" hereinafter and referred to as the Schedule Property).

C. The proposal of the Developer has been approved by the Board of the KHB at its meeting dated ……………………………… and communicated to the Developer vide letter No.: ……………………………………. dated …………………………….. .

D. The proposal of the Developer has been accorded in principle approval by the Government of Karnataka vide the letter No. …………………… dated ………………………… and has permitted to the KHB to enter into this Joint Venture Agreement with the Developer under certain terms and conditions.

E. **As per these approval and the Government Guidelines ………………….. the Developer shall acquire the Schedule A Property, transfer this to the KHB and then develop the layout at its own cost. The KHB shall not bear any financial burden in this project and shall lend its brand name of receive marketing fees as consideration for the same.**

F. The Parties have agreed to enter into this Joint Venture Agreement as per the terms and conditions set out below.

**NOW THEREFORE THIS AGREEMENT WITNESSES THAT:**

**1. Name of the Project**

The name of the project shall be "………………". This name shall be used by both parties to refer to the project in all publicity and sales materials, purchase and transfer of Land.

**2. Procurement of Land**

2.1 The Developer shall submit a detailed plan on the land to be procured for the project and obtain in principle approval of KHB. In the event any additional lands are to be procured a supplemental agreement shall be executed by the parties herein.

2.2 The Developer shall then provide to the KHB all the details of the lands (as set out in Annexure A) and a Summary Title Report in respect of each parcel of property being procured, prior to the said lands being transferred/conveyed to the KHB.

2.3 The Parties shall conduct a joint survey and assessment of the lands to be conveyed to KHB through an Authorized Surveyor or through the Survey Settlement Department. The Developer undertakes to bear all costs of such survey or assessment and the parties shall share all the results of the survey as soon as it becomes available.

2.4 The Developer warrants the land to be procured is fully marketable, does not suffer any defects of title and is not subject to third party claims and any government acquisition proceedings, and that it shall fully indemnify KHB in the event of any challenge. Without limiting the generality of the foregoing, the Developer makes to representation or warranty whatsoever regarding the physical condition of the Lands, including both the surface and the subsurface conditions. The Developer undertakes to cure any such defects in the condition of the lands to the satisfaction of KHB.

2.5 The Developer shall enter into an Agreement to Sell (as set out in Annexure B) with each land owner to transfer the land free from all encumbrances, claims, litigations, charges, liens, and attachments in favour of KHB for the purpose of the joint venture project. The Developer shall hand over a notarized copy of the original Agreement to Sell for safe keeping to KHB. The Developer shall issue an advertisement in a local newspaper and a newspaper having Statewide circulation inviting any objections from third parties having any objections to the transfer of lands from the Vendors.

2.6 The Developer shall procure under this agreement in a sequence and order of priority to be decided in consultation with KHB.

2.7 **The Developer shall then transfer the land to KHB by executing a Sale Deed (as set out in Annexure C) and the Developer shall pay the entire sale consideration and all other incidental costs to the Vendor and shall transfer vacant physical possession of the land to KHB.**

2.8 The Developer undertakes and covenants that they shall handover to the KHB all the original documents and Deeds in respect of each parcel of land conveyed to the KHB and this shall include all Encumbrance Certificates, RTC, Conversion Certificates, Conversion Fee paid receipt, Land Records, Family Tree of each of the vendors, Original records of ownership as well as to handover vacant possession of the Land at the time of execution and registration of a Deed of Sale in respect of each individual parcel of land in favour of the KHB. Thereafter the Developer shall at its own cost secure possession of the land on KHB's behalf and make suitable security arrangements to ensure peaceful possession of the land.

2.9 Where any portion of the transferred land includes Kharab land, KHB shall assist the Developer to secure permission from the government to transfer these portions and the Developer shall deposit any amount payable prior to the transfer.

2.10 In the event that the Developer requires parcels of land contiguous to the procured land to provide effective connectivity and infrastructure and the Developer is unable to procure the same, he may request KHB to acquire the same at the Developer's cost. KHB undertakes to initiate proceedings for the acquisition of such lands on the receipt of the compensation from the Developer. The Developer undertakes to bear all the costs of acquisition including any enhanced compensation payable to land owners due to a court order or otherwise.

2.11 On the transfer of 10 acres of contiguous project lands together with access to the main roads, KHB shall initiate the process to convert any portion of the project lands as may be required. The Developer undertakes to transfer the all amounts payable for conversion to KHB at least 30 days prior to the due date.

2.12 KHB shall appoint authorized officers to be present for the purpose of registration of the Conveyance deeds conveying the Schedule Property in favour of KHB.

2.13 In the event that there is any dispute that arises regarding any land acquired for the project, the Developer undertakes to fully indemnify KHB against any liability or damage that may arise. Further, the Developer undertakes to provide in all contracts entered into by them that it shall take best efforts to resolve all disputes amicably through negotiation and in the event that negotiation fails through arbitration.

**3. Development Phase**

3.1 On the conversion of the project lands, KHB shall grant the Developer the licence to enter upon and develop the lands as per the approved plans and designs according to the terms and conditions of this Agreement. The Developer shall be solely responsible for the development and completion of the project and to secure all necessary statutory approvals and clearances from all Authorities at their own cost. KHB shall facilitate the grant of all such approvals.

3.2 The Developer shall in consultation with KHB appoint at their own cost, qualified Artchitectural and Engineering Firms for the preparation of the layout plan, in compliance with the zonal regulations of the Master Plan in force under the Karnataka Town and Country Planning Act 1961 and any other applicable law or guidelines, as well as working plans, estimates, Detailed Project Reports and Bill of Quantities for the project. KHB shall appoint a Project Management Consultant at the cost of the Developer for the execution, supervision and management of the project.

3.3 The Developer undertakes that all development works shall be carried out within the time periods specified in this Agreement and shall comply with the standards/norms recommended by the KHB, the Government of Karnataka prescribed from time to time.

**4 Sharing of Property and Allotment Process**

4.1 On the Demarcation and formation of the sites or construction of houses KHB shall commence its marketing program by releasing appropriate advertisements and launching sales campaigns at its discretion. <u>KHB shall be entitled to appropriate from the escrow account any expenses related to advertisements or sales campaigns and any other incidental expenses related to the project.</u>

4.2 75% of the residential developable area in any project shall be conveyed by KHB to any purchaser directly and KHB shall secure a No Objection Letter from the Developer before it conveys any property to a purchaser. The Developer shall determine the price at which all such sales shall take place.

4.2.1 <u>At the option of the Developer, KHB may invite applications for this residential developable area and allot the sites/houses through a lottery conduct among the applicants at a price agreed to by both parties.</u>

4.3 25% of the residential developable area in any project <u>excluding</u> corner sites shall be <u>reserved</u> for allotment to the Low Income Group **[15% of the residential developable area] and Economically Weaker Sections [10% of the residential developable area]. These sites/houses/apartments shall be identified by KHB and the**

**Developer Jointly. The sites/houses/apartments in 10% of the residential developable area reserved for allotment to the Economically Weaker Sections and shall be sold on a no-profit-no-loss basis at a price to be determined by both parties. The sites/houses/apartments in 15% of the residential developable area reserved for allotment to the Low Income Group and shall be sold at a price determined by the Developer.** The allotment of these houses/sites shall be in accordance with the Allotment Rules of the KHB. In the event that these houses/sites are not sold within a period of 1 year then KHB may transfer any unsold houses/sites to the Developer or his nominees at the allotment price.

4.4 KHB shall retain the option to construct houses in the sites demarcated for low Income Group and Economically Weaker Sections. In the event that KHB exercise this right, the sites shall be transferred to KHB at a price to be determined by the mutual consent of both parties.

4.5 Any commercial site/building in the project shall be transferred to the Developer or his nominee and the Developer shall have the right to use or sell this property at a price to be determined by the Developer.

4.6 All available civic amenity sites in the layout approved by the statutory authority shall be shared by KHB and the Developer equally by area. KHB shall have preference in selecting their share of CA sites after which the remainder shall be allotted to the Developer. The KHB shall retain its share of the CA sites free of cost. Both the parties shall have the absolute right to dispose off their share of Civic Amenity sites that are allotted to them provided that such sites shall be sold or otherwise disposed off for the original purpose for which it was intended and compliance with the conditions are laid down for allotment and utilization of such Civic Amenity sites. The parties shall receive all consideration received from the sale of these sites directly in their respective accounts and the escrow agreement shall not apply to these sales.

4.7 KHB shall execute the necessary documents for transferring Developer's share of Civic Amenity sites and Commercial Sites in favour of the Developer or their nominees. KHB shall transfer Civic Amenity sites only after handing over of the entire layout to the local body.

**5 Marketing Fees / Royalty**

5.1 The Developer shall pay KHB a fee of 5% of the sale consideration in addition to any admissible taxes, levies incurred by KHB for the transfer of any site, apartment or houses by KHB to or on behalf of the Developer towards marketing expenses and as consideration for the use the brand name of Karnataka Housing Board.

5.2 Where the project consists of residential sites, **KHB shall retain 5% of the developed area in the Developer's share of the project area or equivalent Bank Guarantee** as a security deposit which shall be released 2 years after the completion of the project or on the handover of the project to the local authority whichever is later. Where the project consists of constructed houses or apartments, KHB shall retain 5% of the sale proceeds in addition to it's marketing fee as a security deposit which shall be released 2 years after the completion of the project or on the handover of the project to the local authority whichever is later. In the event that KHB incurs any liability arising out of the failure of the Developer to maintain the project area, defects in construction or development or any other liability which is inadequately indemnified by the Developer, it may utilize the security deposit if any manner to remedy these defects and any other reasonable costs in this regard.

5.3 In the event that KHB incurs any expense on account of the Developer, the Developer undertakes to reimburse KHB within 15 days of KHB intimating the Developer of the expense.

5.4 The Developer agrees to reimburse KHB on the last 5 days of every calendar month the salary and admissible allowances of the KHB personnel exclusively deputed for this project.

**6 Escrow Account and Terms of Payment**

6.1 The parties herein agree to enter into an Escrow Agreement which shall govern the operation of an escrow account where all payments from the Developer to KHB for land acquisition and consideration received by KHB from the sale of the sites/houses/flats in the project shall be deposited the account shall be jointly operated by both parties **and KHB shall respond to any request of the Developer for the release of funds within a period of 15 days from the date of the request.**

6.2 **a. On the completion of 10% of the approved milestones as set out in the Detailed Project Report KHB shall invite applications from the public with the payment of 10% of the sale consideration as an initial deposit for the available sites, houses or apartments in 25% of the residential developable area excluding corner sites reserved for allotment to the Low Income Group and Economically Weaker**

**Sections and from the applicants for the available sites, houses or apartments in 75% of the residential developable area.**

**b. At the option of the Developer, KHB may invite applications from the public with the payment of 10% of the sale consideration as an initial deposit for the available sites, houses or apartments in 75% of the residential developable area. The Developer shall offer the allotment price to the consideration of the Board at the time of collecting initial deposit. The initial deposit collected shall be deposited in the Escrow Account. KHB shall release 75% of the Initial Deposit amounts collected on par with the number of sites, houses or apartments being developed in the project on the completion of 10% of the approved milestones as set out in the Detailed Project Report. Over subscribed Initial Deposit amounts shall be refunded to unsuccessful applicants after allotment. KHB shall retain 25% of the Initial Deposit amounts till the completion of the project.**

**c. Thereafter, KHB on scrutiny of the applications shall allot the available sites, houses or apartments in 25% of the residential developable area excluding corner sites reserved for allotment to the Low Income Group and Economically Weaker Sections and the allotment of these houses/sites shall be in accordance with the Allotment Rules of the KHB.**

**d. Subject to clause 4.2 KHB shall also allot the available sites, houses or apartments in 75% of the residential developable area to the applicants. If the applications are invited by KHB through notification, then KHB shall allot the available sites, houses or apartments in 75% of the residential developable area through a lottery conduct among the applicants applied in response to the notification inviting applications by KHB.**

**e. The remaining balance payment of 90% towards the value of the sites, houses or apartments shall be divided according to the number of milestones to be completed. KHB shall collect further payments from the successful applicants only when the progress is ahead of one milestone. For example on completion of 5$^{th}$ milestone the payment for 4$^{th}$ milestone shall be collected from the successful applicants. The amount collected towards the value of the sites, houses or apartments shall be deposited in the escrow account. This amount further shall be released to the Developer as per the milestones as set out in the Detailed Project Report.**

**6.3** **Sale deeds will be registered by KHB to the successful applicants only after 80% of the development milestones are achieved as set out in the Detailed Project Report and power, water and sewerage connections are secured for each site.**

6.4 **The Developer undertakes that it shall bear all expenses related to the project and shall ensure that no arrangement made under this Agreement imposes any commercial or financial burden or liability on KHB.**

6.5 The parties agree to reconcile the accounts every fortnight. Any discrepancy in account will be intimated to the other party within 7 days from the date of any escrow transfer.

6.6 In addition to the above KHB is entitled to charge purchasers a registration and application fee and retain the said entire fee received as Service Charges.

**7 Property Maintenance**

7.1 The Developer shall ensure administration and maintenance to the entire project development for a minimum period of 2 years or till it is handed over to the Local Body/municipality authorized to administer the area under the development falls, whichever is later.

7.2 The Developer shall fulfil requirements of the local body/municipality including payment of deposits in handing over of the layout.

7.3 The Developer shall be responsible for the maintenance of unsold Houses/Apartments constructed till the properties are sold and handed over to the prospective buyers in good condition.

7.4 **Even after 2 years due to unforeseen reasons, if the layout could not be handed over to the Local Body/municipality authorized to administer the area under the development falls, the Developer may collect the maintenance charges from the allottees/buyers of the sites/houses/apartments after the 2 years of virtual completion of the project till the layout is handed over to the Local body or maintain the layout creating an association of the allottees of the sites/houses/apartments till the layout is handed over to the Local body.**

**8 BORROWINGS**

8.1 If required the Developer shall be entitled to obtain loans from **all scheduled, nationalized banks or financial institutions approved by the RBI** on the guidance value of the schedule property transferred in the name of the **KHB OR to the extent granted by financial institutions. All loan amounts sanctioned by financial institutions shall be released with the consent of KHB as per the milestones as set out in the Detailed Project Report** and this release shall not be subject to clause 6.2.

8.2 The rights and benefits under this agreement shall not be assigned by the Developer to any person, save and except with the prior consent in writing, of the KHB, which consent the KHB shall not deny without assigning any reasons.

8.3 The Developer shall not create nor permit to subsist, any encumbrance or otherwise assign, transfer, sublet or dispose off all or any of the Schedule Property or on the rights under this Agreement, except with KHB's prior written consent, which consent the KHB shall not deny without assigning any reason. The restraints set forth above shall not apply to:

(a) Liens arising by operation of law (or by an agreement evidencing the same)

In the ordinary course of business of the Project;

(b) Liens or encumbrances required by any Applicable law;

(c) Housing loans availed by prospective purchasers of sites or houses.

8.4 The Developer assures and covenants with the KHB that all such borrowings and liabilities created shall be the sole responsibility of the Developer and there shall be no financial liability on the KHB with regard to any such debts and in the event of default in repayment by the Developer, recovery shall be enforced only against the Developer. The Developer undertakes to include this condition into any loan agreement it may reach with third parties.

8.5 KHB shall assist the Developer to secure such financing by depositing the original title deeds of the Schedule Property if:

(a) the documentation covering every borrowing transaction is submitted to, and approved by, the KHB prior to the grant of the loan; and

(b) the borrowing complies with the other obligations of the Developer under this Agreement.

8.6 The Developer undertake that the loans to be obtained for the project shall be utilized for the purpose of this project only and loans obtained for any other project of the Developer will not be encumbered or attached to the proposed venture with the KHB.

8.7 Before the KHB conveys any developed property to prospective buyers, the Developer shall clear any borrowings on the lands and obtain a no lien certificate from the bank on the sites or developed area to be conveyed. This shall, however, not be required in the case the developed property is conveyed to the Developer.

8.8 <u>In the event, that any bank, financial institution or lender forecloses a loan to the Developer it shall deposit any amount realized through the sale of assets over and above the dues owed to it with KHB.</u>

**9 TERM OF AGREEMENT**

This agreement shall be valid for a period 3 years from the date of execution of this Agreement. The agreement may be extended by the parties in writing for a period of 1 year each upto 5 years from the date of execution of this Agreement depending upon the stage and status of the project. Any further extension shall be upon fresh terms and conditions imposed by the KHB. Time is of the essence of this Agreement.

**10 LIMITATION OF LIABILITY OF KHB**

In the event of any claim by any third Parties or by any person/s claiming title to the Schedule property by way of co-ownership, mortgage or any other claim or if the whole or any portion of the schedule property is ever taken away or goes out from the possession of the Purchaser on account of any legal defect in the ownership and title of the former owner, the Developer will be liable and responsible to make good any financial loss suffered by the KHB and hereby agrees and undertakes to keep the KHB indemnified, saved and harmless against all such losses, costs, damages and expenses accuring thereby to the KHB.

**11. BREACH:**

11.1 In the event that any of the Parties is found to be in breach of the representatives and warranties, such party shall indemnify and hold the other Parties harmless in all respects against any loss, damage, liability, cost or expense (including legal expense) that may be incurred by the non-breaching Party as a result of such untrue, incorrect or misleading representation.

11.2 If any of the parties fails to perform their obligations under this Agreement, such party shall be deemed to have breached this Agreement. The non-breaching parties shall be indemnified by the breaching party in respect of the breach. The Party in breach shall compensate the non-breaching party for any direct damages caused by the breach. The above mentioned remedies shall be without prejudice to the right of the non-breaching Parties to obtain an injunction restraining any breach or apprehended breach in accordance with the terms of this Agreement without the necessity of establishing any actual damage.

11.3 The parties agree that in the event of the transfer of ownership or control by the Developer, directly or indirectly, without the permission of KHB, this Agreement shall stand terminated automatically. Provided, that the obligations of such Developer under this Agreement including those related to confidentiality and dispute

ಫಲಾನುಭವಿಗಳನ್ನು ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಕಾತರಿ ಯೋಜನೆಯಡಿ ನೋಂದಾಯಿಸಿರುವ ಫಲಾನುಭವಿಗಳ ಪಟ್ಟಿಯಿಂದ ಆಯ್ಕೆ ಮಾಡಲು ಸೂಚಿಸಲಾಗಿತ್ತು ಹಾಗೂ ಸಮಾಜ ಕಲ್ಯಾಣ ಇಲಾಖೆಯು ಸಿದ್ಧಪಡಿಸಿರುವ ಅನುಸೂಚಿತ ಜಾತಿಗಳ ಪಟ್ಟಿಯಲ್ಲಿರುವ ಕುಟುಂಬಗಳಂತೆ ಗುರುತಿಸಲಾಗಿತ್ತು. ಇದುವರೆಗೂ ರಾಜ್ಯದಲ್ಲಿ 7.11 ಲಕ್ಷ ಫಲಾನುಭವಿಗಳನ್ನು ಗುರುತಿಸಲಾಗಿರುತ್ತದೆ. ಆದರೆ ಈ ಎಲ್ಲಾ ಪಟ್ಟಿಗಳಲ್ಲಿಯೂ ಲೋಪದೋಷವಿರುವುದರಿಂದ ಯೋಜನೆಯಡಿ ಫಲಾನುಭವಿಗಳನ್ನು ಗುರುತಿಸಲು ಅಡಚಣೆಯಾಗಿರುತ್ತದೆ. ಅಲ್ಲದೆ ಪಟ್ಟಿಯಲ್ಲಿರುವ ಫಲಾನುಭವಿಗಳ ನ್ಯೂನ್ಯತೆಯನ್ನು ತಿಳಿದುಕೊಳ್ಳಲು ಪುನಃ ಭೌತಿಕ ಪರಿಶೀಲನೆ ಕಾರ್ಯವನ್ನು ತಾಲ್ಲೂಕು ಸಿಬ್ಬಂದಿಗಳೇ ಮಾಡಬೇಕಿರುತ್ತದೆ. ಇದರಿಂದ ಹೆಚ್ಚಿನ ಕೆಲಸದ ಹೊರೆಯು ತಾಲ್ಲೂಕು ಸಿಬ್ಬಂದಿಯ ಮೇಲೆ ಬೀಳುತ್ತಿರುತ್ತದೆ. ಆದುದರಿಂದ ಯೋಜನೆಯಡಿ ಸಾಕಷ್ಟು ಫಲಾನುಭವಿಗಳನ್ನು ಗುರುತಿಸಲು ಸಹ ವಿಳಂಬವಾಗುತ್ತಿರುತ್ತದೆ.

ಯೋಜನೆಯ ಪರಿಣಾಮಕಾರಿಯಾದ ಅನುಷ್ಠಾನಕ್ಕಾಗಿ ತತ್ರಾಂಶವನ್ನು ಈಗಾಗಲೇ ಸಿದ್ಧಪಡಿಸಲಾಗಿರುತ್ತದೆ. ಯೋಜನೆಯಡಿ ಅರ್ಹ ಫಲಾನುಭವಿಗಳನ್ನು ನೇರವಾಗಿ ಗುರುತಿಸಿ ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಸರ್ಕಾರ ತೀರ್ಮಾನಿಸಿರುತ್ತದೆ. ಅದರಂತೆ ಫಲಾನುಭವಿಗಳನ್ನು ಇತರೆ ಇಲಾಖೆಯಿಂದ ಲಭ್ಯವಿರುವ ಆಧಾರದ ಪಟ್ಟಿಯಂತೆ ಗುರುತಿಸುವ ಬದಲು ಉದ್ದೇಶಿತ ಫಲಾನುಭವಿಗಳು ಮುಖತಃ ಸಂಬಂಧಪಟ್ಟ ತಾಲ್ಲೂಕು ಕಛೇರಿಯಲ್ಲಿ ನಿಗದಿತ ದಾಸ್ತಾವೇಜುಗಳ ಜೊತೆ ಸಲ್ಲಿಸಿದ ಅರ್ಜಿಯ ಆಧಾರದ ಮೇಲೆ ಗುರುತಿಸಬಹುದಾಗಿರುತ್ತದೆ.

ಈ ಹಿನ್ನೆಲೆಯಲ್ಲಿ ಕೆಳಕಂಡ ಆದೇಶವನ್ನು ಹೊರಡಿಸಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 55 ಡಿಎಸ್‌ಪಿ 2011, ಬೆಂಗಳೂರು, ದಿನಾಂಕ : 27–08–2011**

ಆಮ್ ಆದ್ಮಿ ಬೀಮಾ ಯೋಜನೆಯಡಿಯಲ್ಲಿ ಉದ್ದೇಶಿತ ಫಲಾನುಭವಿಗಳು ಮುಖತಃ ಸಂಬಂಧಪಟ್ಟ ತಾಲ್ಲೂಕು ಕಛೇರಿಯಲ್ಲಿ ಕೆಳಕಂಡ ದಸ್ತಾವೇಜುಗಳ ಜೊತೆ ಅರ್ಜಿ ನೀಡಬಹುದಾಗಿರುತ್ತದೆ. ಅದರಂತೆ ದಸ್ತಾವೇಜುಗಳನ್ನು ಪರಿಶೀಲಿಸಿದ ನಂತರ ಅರ್ಜಿದಾರರು ಯೋಜನೆಯಡಿ ಅರ್ಹರು ಎಂದು ಕಂಡುಬಂದ ಪಕ್ಷದಲ್ಲಿ ಅವರನ್ನು ಯೋಜನೆಯಡಿ ಗುರುತಿಸಲು ಆದೇಶಿಸುತ್ತದೆ.

i) ಪಡಿತರ ಚೀಟಿ

ii) ಭೂರಹಿತ ಕೃಷಿ ಕಾರ್ಮಿಕ ದೃಢೀಕರಣ ಪತ್ರ

iii) ವಯಸ್ಸಿನ ದೃಢೀಕರಣ ಪತ್ರ (ಜನನ ಪ್ರಮಾಣ ಪತ್ರ, ಚುನಾವಣಾ ಗುರುತಿನ ಚೀಟಿ, ಪಡಿತರ ಚೀಟಿ)

iv) ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯಡಿ ನೀಡಿರುವ ಜಾಬ್ ಕಾರ್ಡ್ (Job Card)

ಇದರ ಬಗ್ಗೆ ಮಾರ್ಗ ಸೂಚಿಗಳನ್ನು ಪ್ರತ್ಯೇಕವಾಗಿ ಅನುಬಂಧದಲ್ಲಿ ಲಗತ್ತಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಅಶೋಕ್ ಕುಮಾರ್** ಸಿ. **ಮನೋಲಿ**

ಸರ್ಕಾರದ ಪ್ರಧಾನ ಕಾರ್ಯದರ್ಶಿ

ಕಂದಾಯ ಇಲಾಖೆ

## ನಿಯಮಾವಳಿಗಳು

ಸರ್ಕಾರಿ ಆದೇಶ ಸಂಖ್ಯೆ: ಆರ್.ಡಿ. 55 ಡಿ.ಎಸ್.ಪಿ. 2011, ದಿನಾಂಕ 27–8–2011 ಕ್ಕೆ ಅನುಬಂಧ

1. ಈ ನಿಯಮಗಳನ್ನು ಅಮ್ ಆದ್ಮಿ ಬೀಮಾ ಯೋಜನಾ ನಿಯಮಾವಳಿ 2011 ಎಂದು ಕರೆಯತಕ್ಕದ್ದು
2. ನಿಯಮಗಳು ದಿನಾಂಕ 31–03–2008 ರಿಂದ ರಾಜ್ಯಾದ್ಯಂತ ಅನ್ವಯವಾಗತಕ್ಕದ್ದು
3. **ಉದ್ದೇಶ:**– ಬಡತನ ರೇಖೆಗಿಂತ ಕೆಳಗಿರುವ ಗ್ರಾಮೀಣ ಭೂರಹಿತ ಕುಟುಂಬಗಳಿಗೆ ಕುಟುಂಬದ ಮುಖ್ಯ ಪೋಷಕರ ಮರಣದ ಸಂದರ್ಭದಲ್ಲಿ/ಅಂಗವಿಕಲರಾದ ಸಂದರ್ಭದಲ್ಲಿ ಉಂಟಾಗುವ ಆರ್ಥಿಕ ಸಂಕಷ್ಟದ ಪರಿಸ್ಥಿತಿಯಲ್ಲಿ ಆರ್ಥಿಕ ನೆರವು ಒದಗಿಸುವುದಾಗಿರುತ್ತದೆ.
4. ಈ ಯೋಜನೆಯಡಿಯಲ್ಲಿ ಕೆಳಕಂಡ ವ್ಯಕ್ತಿಗಳು ಅರ್ಹರಾಗಿರುತ್ತಾರೆ:
   i) ಬಡತನ ರೇಖೆಗಿಂತ ಕೆಳಗಿರುವ ಗ್ರಾಮೀಣ ಭೂರಹಿತ ಕುಟುಂಬಗಳ 18 ರಿಂದ 59 ವರ್ಷದೊಳಗಿನ ಕುಟುಂಬದ ಮುಖ್ಯಸ್ಥರು/ಮುಖ್ಯ ಪೋಷಕರು
5. ವಿಮಾ ಕಂತು ರೂ. 200/– ಪ್ರತಿ ಕುಟುಂಬದ ಮುಖ್ಯಸ್ಥರಿಗೆ ಇದರಲ್ಲಿ ರೂ. 100/–ನ್ನು ರಾಜ್ಯ ಸರ್ಕಾರ ಹಾಗೂ ರೂ. 100/–ನ್ನು ಕೇಂದ್ರ ಸರ್ಕಾರವು ಭಾರತೀಯ ಜೀವ ವಿಮಾ ಸಂಸ್ಥೆಗೆ ಭರಿಸಲಾಗುತ್ತದೆ.
6. **ಯೋಜನೆಯಿಂದ ದೊರೆಯುವ ಲಾಭಗಳು:–**
   i) ನೈಸರ್ಗಿಕ ಸಾವು ರೂ. 30,000/–ಗಳನ್ನು ವಿಮೆದಾರನ ಕುಟುಂಬದ ನಾಮ ನಿರ್ದೇಶಿತರಿಗೆ ನೀಡಲಾಗುವುದು.
   ii) ಅಪಘಾತದಿಂದ ಸಾವು ರೂ. 75,000/–ಗಳನ್ನು ವಿಮೆದಾರನ ಕುಟುಂಬದ ನಾಮ ನಿರ್ದೇಶಿತರಿಗೆ ನೀಡಲಾಗುವುದು.
   iii) ಶಾಶ್ವತ ಅಂಗವಿಕಲತೆ ರೂ. 75,000/–ಗಳನ್ನು ವಿಮೆದಾರರಿಗೆ ನೀಡಲಾಗುವುದು
   iv) ಭಾಗಶಃ ಅಂಗವಿಕಲತೆ ರೂ. 37,500/–
   v) ವಿದ್ಯಾರ್ಥಿವೇತನ 9 ರಿಂದ 12ನೇ ತರಗತಿಯವರೆಗೆ ಶಿಕ್ಷಣ ಪಡೆಯುತ್ತಿರುವ ಪ್ರತಿ ವಿದ್ಯಾರ್ಥಿಗೆ ತಿಂಗಳಿಗೆ ರೂ. 100/– ರಂತೆ ವಿದ್ಯಾರ್ಥಿವೇತನ (ಎರಡು ಮಕ್ಕಳಿಗೆ ಸೀಮಿತ).
7. ಫಲಾನುಭವಿಗಳ ಆಯ್ಕೆ:
   a) ಉದ್ದೇಶಿತ ಫಲಾನುಭವಿಗಳು ಸಂಬಂಧಪಟ್ಟ ತಾಲ್ಲೂಕು ಕಛೇರಿಯಲ್ಲಿ ಕೆಳಕಂಡ ದಾಸ್ತಾವೇಜುಗಳನ್ನು ಅರ್ಜಿಯ ಜೊತೆ ಸಲ್ಲಿಸತಕ್ಕದ್ದು;
   i) ವಯಸ್ಸಿನ ದೃಢೀಕರಣ ಪತ್ರ (ಜನನ ಪ್ರಮಾಣ ಪತ್ರ/ಚುನಾವಣಾ ಗುರುತಿನ ಚೀಟಿ/ಪಡಿತರ ಚೀಟಿ/ವಯಸ್ಸಿನ ಬಗ್ಗೆ ವೈದ್ಯಕೀಯ ದೃಢೀಕರಣ ಪತ್ರ)

ii) ಭೂರಹಿತ ಕೃಷಿ ಕಾರ್ಮಿಕ ದೃಢೀಕರಣ ಪತ್ರ

iii) ಬಡತನರೇಖೆಗಿಂತ ಕೆಳಗಿರುವ ಫಲಾನುಭವಿಗಳಿಗೆ ನೀಡಿರುವ ಪಡಿತರ ಚೀಟಿ

iv) ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯಡಿ ನೀಡಿರುವ ಜಾಬ್ ಕಾರ್ಡ್ (Job Card)

b) ಅರ್ಜಿಗಳನ್ನು ಕಡ್ಡಾಯವಾಗಿ ಆಮ್ ಆದ್ಮಿ ಬೀಮಾ ಯೋಜನಾ ತಂತ್ರಾಂಶದ ಮೂಲಕವೇ ಸ್ವೀಕರಿಸತಕ್ಕದ್ದು.

8. ಉದ್ದೇಶಿತ ಫಲಾನುಭವಿಯು ಯೋಜನೆಯಡಿ ಅರ್ಜಿಯನ್ನು ಸಲ್ಲಿಸುವಾಗ 9 ರಿಂದ 12ನೇ ತರಗತಿಯಲ್ಲಿ ಓದುತ್ತಿರುವ ಫಲಾನುಭವಿಯ ಕುಟುಂಬಕ್ಕೆ ಸೇರಿದ ಮಕ್ಕಳ ವಿವರವನ್ನು ಸಲ್ಲಿಸತಕ್ಕದ್ದು (ಇದ್ದಲ್ಲಿ).

i) ಮಕ್ಕಳ ಜನನ ಪ್ರಮಾಣ ಪತ್ರ

ii) ಶಾಲಾ ಮುಖ್ಯಸ್ಥರಿಂದ ಶಾಲಾ ಪ್ರಮಾಣ ಪತ್ರ

9. ಸಂಬಂಧಪಟ್ಟ ಗ್ರಾಮ ಲೆಕ್ಕಾಧಿಕಾರಿಗಳು ಅರ್ಜಿಗಳ ಸತ್ಯಾಸತ್ಯತೆಯನ್ನು ವಿಚಾರಣೆ ನಡೆಸುವ ಅಧಿಕಾರಿಗಳಾಗಿರುತ್ತಾರೆ. ವಿಚಾರಣಾಧಿಕಾರಿಯು ಪ್ರಕರಣದ ನೈಜತೆ ಹಾಗೂ ಅರ್ಹತೆ ಬಗ್ಗೆ ಖಚಿತಪಡಿಸಿಕೊಳ್ಳುವುದಕ್ಕಾಗಿ ತನಗೆ ಸೂಕ್ತವೆನಿಸುವ ಹಾಗೂ ಇತರೆ ವ್ಯಕ್ತಿಗಳನ್ನು ಖುದ್ದಾಗಿ ಭೇಟಿ ಮಾಡಬಹುದು. ಆ ಬಗ್ಗೆ ತನ್ನ ವಿಶೇಷ ಶಿಫಾರಸ್ಸಿನೊಂದಿಗೆ ಸಂಬಂಧಪಟ್ಟ ರೆವೆನ್ಯೂ ಪರಿವೀಕ್ಷಕರ ಮೂಲಕ ಸಾಮಾಜಿಕ ಭದ್ರತಾ ಯೋಜನೆಗಳ ಶಿರಸ್ತೇದಾರರಿಗೆ ವರದಿ ಸಲ್ಲಿಸತಕ್ಕದ್ದು.

10. ಸಂಬಂಧಪಟ್ಟ ತಹಸೀಲ್ದಾರರು ಈ ಯೋಜನೆಯಡಿ ಮಂಜೂರಾತಿ ಅಧಿಕಾರಿಗಳಾಗಿರುತ್ತಾರೆ. ಸಂಬಂಧಪಟ್ಟ ಸಾಮಾಜಿಕ ಭದ್ರತಾ ಯೋಜನೆಯ ಶಿರಸ್ತೆದಾರರು, ದಾಖಲೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಮಂಜೂರಾತಿಗೆ ಶಿಫಾರಸ್ಸು ಮಾಡತಕ್ಕದ್ದು.

11. ಉದ್ದೇಶಿತ ಫಲಾನುಭವಿಗೆ ಯೋಜನೆಯಡಿ ಸವಲತ್ತು ಮಂಜೂರಾದ ಪಕ್ಷದಲ್ಲಿ ತಂತ್ರಾಂಶದ ಮೂಲಕವೇ ವಿಮಾ ಬಾಂಡ್‌ನ್ನು ಮುದ್ರಿಸಿ ಕೊಡತಕ್ಕದ್ದು.

12. ಸಾಮಾಜಿಕ ಭದ್ರತಾ ಯೋಜನೆಯ ಶಿರಸ್ತೆದಾರರು ಅರ್ಹ ಫಲಾನುಭವಿಗಳಿಗೆ ತಂತ್ರಾಂಶ್ ಮೂಲಕ ಯೋಜನೆಯನ್ನು ಮಂಜೂರು ಮಾಡಿದ ನಂತರ ವಿಮಾ ಕಂತನ್ನು ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯದಿಂದ ಭಾರತೀಯ ಜೀವ ವಿಮಾ ನಿಗಮಕ್ಕೆ ಪ್ರತಿ ತಿಂಗಳು ಫಲಾನುಭವಿಗಳ ಸಂಖ್ಯೆಯ ಆಧಾರದ ಮೇಲೆ ಭರಿಸತಕ್ಕದ್ದು.

13. ವಿಮಾದಾರರು ಅಪಘಾತಕ್ಕೊಳಗಾಗಿ ನಿಧನಹೊಂದಿದಲ್ಲಿ ವಿಮಾ ಕ್ಲೈಮಾ ಗಳನ್ನು ಇತ್ಯರ್ಥಗೊಳಿಸಲು ತಂತ್ರಾಂಶದ ಮೂಲಕವೇ ಭಾರತೀಯ ಜೀವ ವಿಮಾ ನಿಗಮಕ್ಕೆ ಕಳುಹಿಸತಕ್ಕದ್ದು. ಇದರ ಜವಾಬ್ದಾರಿಯೂ ಸಾಮಾಜಿಕ ಭದ್ರತಾ ಯೋಜನೆಯ ಶಿರಸ್ತೇದಾರರದ್ದಾಗಿರುತ್ತದೆ.

**ಎಸ್. ಕಾತ್ಯಾಯಿನಿ ದೇವಿ**
ಪೀಠಾಧಿಕಾರಿಗಳು
ಸಾಮಾಜಿಕ ಭದ್ರತೆ ಮತ್ತು
ಪಿಂಚಣಿಗಳ ನಿರ್ದೇಶನಾಲಯ, ಕಂದಾಯ ಇಲಾಖೆ

ಪಿ.ಆರ್. 2183

## INFRASTRUCTURE DEVELOPMENT SECRETARIAT

**Sub :** Development of International Convention Centre adjacent to Bangalore International Airport.

**Read :** 1. G. O. No. IDD 44 DIA 2011, dated 21-06-2011

2. Letter No. DGM/(IPD-1)1161/2011-12, dated 20-08-2011 of the Deputy General Manager KSIIDC.

**Preamble:**

In the G.O. read at (1) above, sanction was accorded for the development of an International Convention Centre adjacent to Bangalore International Airport and to constitute an Empowered Committee under the Chairmanship of Chief Secretary to take all the decisions relating to the project and accord all approvals to enable speedy implementation of the project. The Empowered Committee was given powers to constitute a Technical Evaluation committee comprising external expert and senior representatives of concerned departments of the Government of Karnataka to evaluate the technical bids of the EPC bidders.

2. In the first Empowered Committee meeting held on 24-06-2011 among other things the committee approved the constitution of a Technical Evaluation Committee with the following members.

| | | |
|---|---|---|
| The Secretary to Government, Infrastructure Development Department | … | Chairman |
| The Secretary to Government, Public Works Department | … | Member |
| The Chief Architect | … | Member |
| Dr. Vishwanatha, Torsteel Foundation | … | Member |
| Prof. Ravindra, Dept., of Architecture, UVCE | … | Member |
| Any other member, the EPC decides | … | Member |

3. Hence the following order

**Government Order No. IDD 44 DIA 2011, Bangalore, dated 03-09-2011**

In the circumstances explained in the preamble, sanction is hereby accorded for constitution of a Technical Evaluation Committee with the following members.

| | | |
|---|---|---|
| The Secretary to Government, Infrastructure Development Department | … | Chairman |
| The Secretary to Government, Public Works Department | … | Member |
| The Chief Architect | … | Member |

Dr. Vishwanatha, Torsteel Foundation … Member
Prof. Ravindra, Dept., of Architecture, UVCE … Member
Any other member, the EPC decides … Member
Any other member, decided by EPC

The committee will evaluate the technical bids of the EPC bidders/tender processes and documents, scrutiny of EPC bids both technical and financial and also make suitable recommendations to the empowered committee for the appointment of architect/consultant selected through a procurement process for preparation of master plan, design (architectural and structural) etc.,

By Order and in the name of the Governor of Karnataka
**S. J. Sampath Kumar**
Under Secretary to Government
P.R. 2184 Infrastructure development department

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ರಾಜ್ಯದ ಸ್ಥಳೀಯ ಸಂಸ್ಥೆಗಳಿಗೆ ನೀರು ಸರಬರಾಜು ಯೋಜನೆಗಳ ಅಭಿವೃದ್ಧಿ ಮತ್ತು ಒಳಚರಂಡಿ ವ್ಯವಸ್ಥೆಗಳನ್ನು ಕಲ್ಪಿಸಲು ಸಮಗ್ರ ಯೋಜನಾ ವರದಿಯನ್ನು ತಯಾರಿಸುವ ಕುರಿತು.

**ಓದಲಾಗಿದೆ :** 1. ದಿನಾಂಕ 26-07-2011 ರಂದು ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆ.

2. ಸರ್ಕಾರದ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ ಇವರ ಅ.ಸ.ಪತ್ರ ಸಂಖ್ಯೆ: ನಅಇ 16 ಯುಡಿಎಸ್ 2011, ದಿನಾಂಕ 04-08-2011.

**ಪ್ರಸ್ತಾವನೆ :**

ರಾಜ್ಯದ ಸ್ಥಳೀಯ ಸಂಸ್ಥೆಗಳಿಗೆ ನೀರು ಸರಬರಾಜು ವ್ಯವಸ್ಥೆಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಕಲ್ಪಿಸುತ್ತಿದ್ದು, ಕೆಲವು ಸ್ಥಳೀಯ ಸಂಸ್ಥೆಗಳ ನಿರ್ವಹಣೆಯನ್ನು ಸಹ ನಿರ್ವಹಿಸುತ್ತದೆ. ನೀರು ಸರಬರಾಜು ವ್ಯವಸ್ಥೆಯು ಉತ್ತಮವಾಗಿರುವಂತಹ ಸ್ಥಳಗಳಲ್ಲಿ ಮಂಡಳಿಯು ಒಳಚರಂಡಿ ವ್ಯವಸ್ಥೆಯನ್ನು ಸಹ ಕಲ್ಪಿಸಲು ಕರ್ನಾಟಕ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ಕಾಯ್ದೆ 1973 (ಕರ್ನಾಟಕ ಕಾಯ್ದೆ 1974) ಕಲಂ 16 ಮತ್ತು 17ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಕಲ್ಪಿಸುವುದು ಮಂಡಳಿಯ ಕರ್ತವ್ಯವಾಗಿರುತ್ತದೆ.

ಮಂಡಳಿಯು ಸದರಿ ಕಾಯ್ದೆಯ ಕಲಂ 16ರಡಿ ಯೋಜನೆಗಳ ಅನುಷ್ಠಾನಕ್ಕೆ ಅಗತ್ಯವಿರುವ ಹಣಕಾಸು ವ್ಯವಸ್ಥೆ ಮತ್ತು ಸಾಲಗಳನ್ನು ಸ್ಥಳೀಯ ಸಂಸ್ಥೆಗಳ ಪರವಾಗಿ ಪಡೆಯಲು ಅವಕಾಶ ಕಲ್ಪಿಸಲಾಗಿದೆ. ಮುಂದುವರೆದು ಸದರಿ ಕಾಯ್ದೆಯ ಕಲಂ 17ರಡಿ ಮಂಡಳಿಯು ಈ ಕೆಳಕಂಡ ಕಾರ್ಯಗಳನ್ನು ಸಹ ಕೈಗೊಳ್ಳಲು ಅಧಿಕಾರ ವಿನಿಯೋಗಿಸಲಾಗಿದೆ.

ಅ) ಸ್ಥಳೀಯ ಸಂಸ್ಥೆಯ ಅಥವಾ ಸರ್ಕಾರದ ನಿರ್ದೇಶನದನ್ವಯ ಅಥವಾ ಮಂಡಳಿಯ ಸ್ವಯಿಚ್ಛೆಯಿಂದ ಯಾವುದೇ ಅಗತ್ಯ ಕಾರ್ಯಗಳನ್ನು ಈ ಕೆಳಕಂಡಂತೆ ಕೈಗೊಳ್ಳಬಹುದಾಗಿರುತ್ತದೆ.

i) ಸ್ಥಳೀಯ ಸಂಸ್ಥೆಗಳಿಗೆ ಅಗತ್ಯವಿರುವ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಗಳನ್ನು ಕಲ್ಪಿಸಲು ಅಗತ್ಯವಿರುವ ಯೋಜನಾ ಮಾದರಿ ಸರ್ವೇ ತಪಾಸಣೆ, ಮತ್ತು ಅನುಷ್ಠಾನಗೊಳಿಸುವ ರೀತಿ,

ii) ನೀರು ಸರಬರಾಜು ಮತ್ತು ಒಳಚರಂಡಿ ಯೋಜನೆಗಳನ್ನು ಒಂದು ಸ್ಥಳೀಯ ಸಂಸ್ಥೆಗಿಂತ ಹೆಚ್ಚಿನ ಸ್ಥಳೀಯ ಸಂಸ್ಥೆಗಳಲ್ಲಿ ಅಗತ್ಯವಿದ್ದಲ್ಲಿ ಒಂದೇ ಯೋಜನೆಯಡಿ ಕಲ್ಪಿಸಲು ಯೋಜನೆಯನ್ನು ರೂಪಿಸಲು;

iii) ಸದರಿ ರೂಪಿಸಿದ ಯೋಜನೆಗಳನ್ನು ಅನುಷ್ಠಾನಗೊಳಿಸಲು ಮತ್ತು ಹಂತಹಂತವಾಗಿ ಸ್ಥಳೀಯ ಸಂಸ್ಥೆಗಳಿಗೆ ಒದಗಿಸಲು;

ಮಂಡಳಿ ಪ್ರಾರಂಭಗೊಂಡ ದಿನಾಂಕದಿಂದ ಮಾರ್ಚ್ 2011 ಅಂತ್ಯಕ್ಕೆ 483 ನೀರು ಸರಬರಾಜು ಯೋಜನೆಗಳನ್ನು ಮತ್ತು 49 ಒಳಚರಂಡಿ ಯೋಜನೆಗಳನ್ನು ಒಟ್ಟು ರೂ. 2155.00 ಕೋಟಿಗಳ ವೆಚ್ಚದಲ್ಲಿ ಕಲ್ಪಿಸಿರುತ್ತದೆ. ನಗರ/ಪಟ್ಟಣಗಳ (ಬೆಂಗಳೂರು ಹೊರತುಪಡಿಸಿ) ಪ್ರದೇಶದ ಶೇ. 75% ರಷ್ಟು ಜನಸಂಖ್ಯೆಗೆ ನೀರು ಸರಬರಾಜು ಮತ್ತು ಶೇ. 29% ರಷ್ಟು ಒಳಚರಂಡಿ ವ್ಯವಸ್ಥೆಯನ್ನು ಕಲ್ಪಿಸಲಾಗಿದೆ. ರಾಜ್ಯದ ಕುಡಿಯುವ ನೀರಿನ ನೀತಿಯನ್ವಯ ಎಲ್ಲಾ ಸ್ಥಳೀಯ ಸಂಸ್ಥೆಗಳಿಗೆ ತಲಾ ದಿನಂ ಪ್ರತಿ 135 ಲೀಟರ್, ಕನಿಷ್ಠ ನೀರು ಸರಬರಾಜು ಮಾಡುವುದು ಅಗತ್ಯವಿರುತ್ತದೆ. ರಾಜ್ಯದ ಎಲ್ಲಾ ಸ್ಥಳೀಯ ಸಂಸ್ಥೆಗಳಲ್ಲಿ ಸುರಕ್ಷಿತ ಕುಡಿಯುವ ನೀರು ಒದಗಿಸಲು ನದಿಗಳು/ಕಾಲುವೆಗಳು ಮತ್ತು ಇತರೆ ಬಾಹ್ಯ ಜಲ ಅಳವಡಿಸಿಕೊಂಡಲ್ಲಿ, ಕುಡಿಯುವ ನೀರು ಸರಬರಾಜನ್ನು ಸಾಕಷ್ಟು ಪ್ರಮಾಣದಲ್ಲಿ ನೀಡಲು ಸಾಧ್ಯವಾಗುತ್ತದೆ. ಇದಲ್ಲದೆ, ತಲಾ ದಿನಂಪ್ರತಿ 135 ಲೀಟರ್‌ನಂತೆ ನೀರು ಸರಬರಾಜು ಮಾಡುತ್ತಿರುವ ನಗರ/ಪಟ್ಟಣಗಳಲ್ಲಿ ಒಳಚರಂಡಿ ವ್ಯವಸ್ಥೆಯನ್ನು ಕಲ್ಪಿಸಬೇಕಾಗಿರುತ್ತದೆ.

ಮೇಲಿನ ಎಲ್ಲಾ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಮುಂದಿನ 15 ವರ್ಷಗಳಲ್ಲಿ ರಾಜ್ಯದ ಎಲ್ಲಾ ಸ್ಥಳೀಯ ಸಂಸ್ಥೆಗಳಲ್ಲಿ ಸಮಗ್ರ ನೀರು ಸರಬರಾಜು ಯೋಜನೆಗಳನ್ನು ಮತ್ತು ಅಗತ್ಯ ಒಳಚರಂಡಿ ಯೋಜನೆಗಳನ್ನು ಕಲ್ಪಿಸಲು ಸಮಗ್ರ ಯೋಜನೆಯನ್ನು ಸ್ಥಳೀಯ ಸಂಸ್ಥೆಗಳನ್ವಯ ರೂಪಿಸಲು ಇಚ್ಚಿಸುತ್ತದೆ. ಸದರಿ ಸಮಗ್ರ ಯೋಜನೆಯಲ್ಲಿ ಎಲ್ಲಾ ಸ್ಥಳೀಯ ಸಂಸ್ಥೆಗಳ ನೀರು ಸರಬರಾಜು ವ್ಯವಸ್ಥೆಯನ್ನು ತಲಾ ದಿನಂಪ್ರತಿ 135 ಲೀಟರ್‌ಗೆ ಹೆಚ್ಚಿಸಿ ಸರಬರಾಜು ಮಾಡಲು ಅಗತ್ಯವಿರುವ ಸುಧಾರಿತ ಕ್ರಮಗಳನ್ನು ಆಧುನೀಕರಣಗೊಳಿಸುವಲ್ಲಿ ಮತ್ತು ಸಗಟು ನೀರು ಸರಬರಾಜು ಯೋಜನೆವರೆಗೂ ಹಾಗೂ ಮುಂದುವರೆದು ಗ್ರಾಹಕರಿಗೆ ಸರಬರಾಜು ಮಾಡುವ ವಿತರಣಾ ಜಾಲಗಳನ್ನು ಆಯಾ ಸ್ಥಳೀಯ ಸಂಸ್ಥೆಗಳ ಜನಸಂಖ್ಯೆಯ ಬೆಳವಣಿಗೆಗೆ ಅನುಗುಣವಾಗಿ ಒದಗಿಸಬೇಕಾಗಿರುತ್ತದೆ. ಈ ನಿಟ್ಟಿನಲ್ಲಿ ಅಸಮರ್ಪಕ ನೀರು ಸರಬರಾಜು ಮಾಡುತ್ತಿರುವ ಸ್ಥಳೀಯ ಸಂಸ್ಥೆಗಳನ್ನು ಅದ್ಯತೆ ಮೇಲೆ ತೆಗೆದುಕೊಳ್ಳಬೇಕಾಗಿರುತ್ತದೆ.

ಒಳಚರಂಡಿ ವ್ಯವಸ್ಥೆಗಳನ್ನು ಹಾಲಿ ತಲ ದಿನಂಪ್ರತಿ 135 ಲೀಟರ್ ನೀರು ಸರಬರಾಜು ಮಾಡುತ್ತಿರುವ/ಮಾಡಲು ಉದ್ದೇಶಿಸಿ ಯೋಜನೆ ರೂಪಿಸುತ್ತಿರುವ/ರೂಪಿಸಲು ಇಚ್ಛಿಸಿರುವ ಸ್ಥಳೀಯ ಸಂಸ್ಥೆಗಳಲ್ಲಿ ಅದ್ಯತೆ ಮೇಲೆ ಕಲ್ಪಿಸಲು ಸಮಗ್ರ ಯೋಜನೆ ರೂಪಿಸಬೇಕಾಗಿರುತ್ತದೆ. ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಗಳನ್ನು ಕಲ್ಪಿಸಲು ಸಮಗ್ರ ಯೋಜನೆಯನ್ನು ರೂಪಿಸಿದ ನಂತರ ವಾರ್ಷಿಕ ಕ್ರಿಯಾ ಯೋಜನೆಯನ್ನು ಸ್ಥಳೀಯ ಸಂಸ್ಥೆವಾರು ತೆಗೆದುಕೊಳ್ಳಲು ಅವಕಾಶ ಕಲ್ಪಿಸಬೇಕಾಗಿರುತ್ತದೆ. ಈ ಯೋಜನೆಯನ್ನು ಮಂಡಳಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ತಾಂತ್ರಿಕ ಸಿಬ್ಬಂದಿಯಿಂದ ರೂಪಿಸತಕ್ಕದ್ದು ಇದನ್ನು ಹೊರತು ಪಡಿಸಿ ಅಗತ್ಯವಿರುವಲ್ಲಿ ಮಾತ್ರ ಸೂಕ್ತ ಕಾರಣಗಳನ್ನು ಸರ್ಕಾರಕ್ಕೆ ನೀಡಿ ಹೊರಗುತ್ತಿಗೆ ಆಧಾರದ ಮೇಲೆ ತೆಗೆದುಕೊಳ್ಳಲು ಕ್ರಮವಹಿಸಬಹುದಾಗಿರುತ್ತದೆ. ಸದರಿ ಸಮಗ್ರ ಯೋಜನೆಯನ್ನು ರೂಪಿಸಲು ಮಂಡಳಿಯಲ್ಲಿ ಲಭ್ಯವಿರುವ ಹಾಗೂ 2011–12ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿದ ಮೊತ್ತದಿಂದ ಬಳಸಲು ಮಂಡಳಿಗೆ ಅನುಮೋದನೆ ನೀಡಬಹುದಾಗಿರುತ್ತದೆ.

ಮಂಡಳಿಯು ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಗಳನ್ನು ಕಲ್ಪಿಸಲು ಸಮಗ್ರ ಯೋಜನೆಯನ್ನು ಆದ್ಯತೆ ಮೇಲೆ ಮುಂದಿನ 2 ತಿಂಗಳ ಅವಧಿಯೊಳಗೆ ತಯಾರಿಸತಕ್ಕದ್ದು. ಸದರಿ ಯೋಜನೆಗಳನ್ನು ತಯಾರಿಸಲು ಅಗತ್ಯವಿರುವ ಮೊತ್ತ ಹಾಗೂ ಸದರಿ ಮೊತ್ತವನ್ನು ಕ್ರೋಢೀಕರಿಸಲು ಸಂಪನ್ಮೂಲಗಳನ್ನು ಸಹ ಈ ಸಮಗ್ರ ಯೋಜನೆಯಲ್ಲಿ ಸೇರಿಸತಕ್ಕದ್ದು. ನೀರು ಸರಬರಾಜು ಮತ್ತು ಒಳಚರಂಡಿ ಯೋಜನೆಗಳನ್ನು ಸಮಗ್ರ ಯೋಜನೆಯಲ್ಲಿ ಸೇರಿಸಲು ರೇಖಾ ಅಂದಾಜು ತಯಾರಿಸಿ ಅವಶ್ಯವಾದ ಮೊತ್ತವನ್ನು ವಾರ್ಷಿಕವಾಗಿ ವಿಭಜಿಸಿ ಹಂತಹಂತವಾಗಿ ಕಾಲಮಿತಿಯೊಳಗೆ ಹಾಗೂ ಸದರಿ ಯೋಜನೆಗಳ ಅನುಷ್ಠಾನಕ್ಕೆ ಅಗತ್ಯವಿರುವ ತಾಂತ್ರಿಕತೆ ಮತ್ತು ಯಾಂತ್ರಿಕ ವ್ಯವಸ್ಥೆಗಳನ್ನು ಯೋಜನೆಯ ವೆಚ್ಚ ಮತ್ತು ಅನುಷ್ಠಾನಗೊಳಿಸುವ ಕಾಲಾವಧಿಯನ್ನು ಮಿತಿಗೊಳಿಸುವ ಉದ್ದೇಶದಿಂದ ಕೂಡಿ ರೂಪಿಸತಕ್ಕದ್ದು.

ಮೇಲಿನ ಅಂಶಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 16 ಯುಡಿಎಸ್ 2011, ಬೆಂಗಳೂರು, ದಿನಾಂಕ : 29–08–2011**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ರಾಜ್ಯದ ಎಲ್ಲಾ ಸ್ಥಳೀಯ ಸಂಸ್ಥೆಗಳಲ್ಲಿ ಹಂತ ಹಂತವಾಗಿ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯನ್ನು ಮುಂದಿನ 15 ವರ್ಷಗಳಲ್ಲಿ ಪೂರೈಸಲು ಸಮಗ್ರ ಯೋಜನೆಯೊಂದನ್ನು ರೂಪಿಸಿ ಸದರಿ ಯೋಜನೆಯಲ್ಲಿ ಪ್ರತಿ ಸ್ಥಳೀಯ ಸಂಸ್ಥೆಗೆ ಪ್ರತ್ಯೇಕ ಯೋಜನೆಯನ್ನು ರೂಪಿಸಲು ಮತ್ತು ಅದರ ಅನುಷ್ಠಾನಕ್ಕೆ ವಾರ್ಷಿಕ ಕ್ರಿಯಾ ಯೋಜನೆಯನ್ನು ಸರ್ಕಾರವು ಕಾಲದಿಂದ ಕಾಲಕ್ಕೆ ಆಯವ್ಯಯದಲ್ಲಿ ಒದಗಿಸುವ ಮೊತ್ತದಲ್ಲಿ ಅವಕಾಶ ಕಲ್ಪಿಸಿ ಸಮಗ್ರ ಯೋಜನೆಗೆ ರೇಖಾ ಅಂದಾಜನ್ನು ತಯಾರಿಸಿ ಸದರಿ ಅಂದಾಜಿನಲ್ಲಿ ವಾರ್ಷಿಕವಾಗಿ ಅನುಮೋದಿತ ದರಪಟ್ಟಿ ಆಧಾರದ ಮೇಲೆ ಪ್ರತ್ಯೇಕವಾದ ಯೋಜನಾವಾರು ಅಂದಾಜು ಪಟ್ಟಿಯನ್ನು ತಯಾರಿಸಲು ಸಹ ಅವಕಾಶ ಕಲ್ಪಿಸಿ ಮುಂದಿನ 2 ತಿಂಗಳ ಅವಧಿಯೊಳಗೆ ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಸಮಗ್ರ ಯೋಜನೆಯನ್ನು ಸರ್ಕಾರಕ್ಕೆ ಸಲ್ಲಿಸಲು ಆದೇಶಿಸಿದೆ. ಸಮಗ್ರ ಯೋಜನೆಗೆ ತಗಲುವ ವೆಚ್ಚವನ್ನು ಮಂಡಳಿಯ ಯೋಜನಾ ವೆಚ್ಚದಲ್ಲಿ ಉಳಿತಾಯವಾಗಿರುವ ಮೊತ್ತದಲ್ಲಿ ಬರಿಸಲು ಅನುಮೋದನೆ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ. ಎಂ. ಹಿರೇಮಠ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

ಪಿ.ಆರ್. 2185

## ಒಳಾಡಳಿತ ಸಚಿವಾಲಯ

**ವಿಷಯ** : ಶ್ರೀ ನಾಗರಾಜಪ್ರಸಾದ್, ಪಿ.ಸಿ., ಶಿವಾಜಿನಗರ ಪೊಲೀಸ್ ಠಾಣೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರ ಹಾಗೂ ಉಪ ಪೊಲೀಸ್ ಕಮಿಷನರ್, ಪೂರ್ವ ವಿಭಾಗ, ಬೆಂಗಳೂರು ಇವರ ಆದೇಶ ಸಂಖ್ಯೆ:07/ಡಿಇ/ಆರ್–6/ಪೂ/06, ದಿನಾಂಕ: 30/06/2008, 20/02/2010
2. ಶಿಸ್ತು ಪ್ರಾಧಿಕಾರ ಹಾಗೂ ಉಪ ಪೊಲೀಸ್ ಕಮಿಷನರ್, ಪೂರ್ವ ವಿಭಾಗ, ಬೆಂಗಳೂರು ಇವರ ಆದೇಶ ಸಂಖ್ಯೆ: 10/ಡಿಇ/ಆರ್–6/ಪೂ/07, ದಿನಾಂಕ: 28/02/2011
3. ಮೇಲ್ಮನವಿ ಪ್ರಾಧಿಕಾರ ಹಾಗೂ ಅಡಿಷನಲ್ ಪೊಲೀಸ್
4. ಕಮೀಷನರ್, ಆಡಳಿತ, ಬೆಂಗಳೂರು ನಗರ ಇವರ ಆದೇಶ ಸಂಖ್ಯೆ: 57/ಅಪೀಲು/2008, ದಿನಾಂಕ: 24/08/09
5. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 26–04–10
6. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2) 14/2010–11 ದಿನಾಂಕ: 19–05–2011

**ಪ್ರಸ್ತಾವನೆ:**

ಶ್ರೀ ನಾಗರಾಜಪ್ರಸಾದ್, ಪಿ.ಸಿ., ಶಿವಾಜಿನಗರ ಪೊಲೀಸ್ ಠಾಣೆ, ಬೆಂಗಳೂರು ಇವರು ಜೆ.ಬಿ. ನಗರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ನಿರ್ಲಕ್ಷತೆ, ಬೇಜವಾಬ್ದಾರಿತನ, ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ಶ್ರೀ ನಾಗರಾಜ್ ಪ್ರಸಾದ್, ಪಿ.ಸಿ. 3448, ಜೆ.ಬಿ ನಗರ ಪೊಲೀಸ್ ಠಾಣೆ, ಆದ ನೀವು ದಿ:05–6–05 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಿಯಾಗಿರುವುದರಿಂದ ಈ ಕಛೇರಿ ಪತ್ರ ಸಂಖ್ಯೆ: 80: ಗೈಹಾ:ಪೂ:2004–05, ದಿ:16–7–2005 ರಂದು ಅನಧಿಕೃತವಾಗಿ ಗೈರು ಹಾಜರಿಯಾಗುವುದಕ್ಕೆ ಸೂಚನಾ ಪತ್ರವನ್ನು ನೀಡಿ ಸೂಚನಾ ಪತ್ರ ತಲುಪಿದ ತಕ್ಷಣ ಕರ್ತವ್ಯಕ್ಕೆ ಹಾಜರಾಗಬೇಕು ಇಲ್ಲದಿದ್ದಲ್ಲಿ ಕರ್ನಾಟಕ ಪೊಲೀಸ್ ಮ್ಯಾನುಯಲ್ ಭಾಗ–1ರಡಿಯಲ್ಲಿರುವ ಆದೇಶ ಸಂಖ್ಯೆ 525ರ ಪ್ರಕಾರ ನಿಮ್ಮನ್ನು **ನಾಪತ್ತೆ ಆಸಾಮಿ** ಎಂದು ಪರಿಗಣಿಸಲಾಗುವುದು ಎಂದು ಸೂಚಿಸಲಾಗಿತ್ತು. ನೀವು ಸದರಿ ಸೂಚನಾ ಪತ್ರವನ್ನು ದಿ:19–7–2005 ರಂದು ಸ್ವೀಕರಿಸಿರುತ್ತೀರಿ. ಇದನ್ನು ಸ್ವೀಕರಿಸಿ ಒಂದು ವರ್ಷವಾದರೂ ಸಹ ನೀವು ಇದುವರೆಗೂ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುವುದಿಲ್ಲ. ನೀವು ಶಿಸ್ತಿನ ಇಲಾಖೆಯ ನೌಕರನಾಗಿ ಮೇಲಾಧಿಕಾರಿಗಳಿಂದ ರಜೆ ಮಂಜೂರು ಮಾಡಿಸಿಕೊಳ್ಳದೇ ಅನಧಿಕೃತವಾಗಿ ಗೈರುಹಾಜರಿಯಾಗಿ ಒಂದು ವರ್ಷ ಎರಡು ತಿಂಗಳಾದರೂ ಸಹ ಇದುವರೆಗೂ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೇ ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷತೆ ಬೇಜವಾಬ್ದಾರಿ ಹಾಗೂ ಸೇವಾ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿಲ್ಲವೆಂದು ಸಲ್ಲಿಸಿದ ವರದಿಯನ್ನು ಒಪ್ಪದೆ ಅರ್ಜಿದಾರರ ಸಮಜಾಯಿಷಿಯನ್ನು ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮಿಷನರ್, ಪೂರ್ವ ವಿಭಾಗ ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 30/06/2008ರ ಆದೇಶದಲ್ಲಿ ಅರ್ಜಿದಾರರನ್ನು ಕೆ.ಸಿ.ಎಸ್.ಆರ್ ನಿಯಮ 95(3) ರೀತ್ಯಾ ಸೇವೆಯಿಂದ ತೆಗೆದುಹಾಕಿರುವುದರಿಂದ ದಿನಾಂಕ:05–6–2005 ರಿಂದ 13–07–2007ರ ವರೆಗಿನ ಅನಧಿಕೃತವಾಗಿ ಗೈರುಹಾಜರಾದ ಅವಧಿಯನ್ನು ಕೆ.ಸಿ.ಎಸ್.ಆರ್. ನಿಯಮ 106(ಎ) ರೀತ್ಯಾ ಸಂಬಳರಹಿತ ರಜೆಯೆಂದು ಪರಿಗಣಿಸಿ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಆಯುಕ್ತರು, ಆಡಳಿತ, ಬೆಂಗಳೂರು, ಇವರು ಪರಿಶೀಲಿಸಿ ಆ.ಪೊ.ಅ. ರವರ ವಿರುದ್ಧದ ಇಲಾಖಾ ವಿಚಾರಣೆಯು ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಜರುಗಿಸಿದ್ದು, ಆದರೆ ಶಿಸ್ತು ಪ್ರಾಧಿಕಾರವು ದಂಡನೆಯನ್ನು ವಿಧಿಸುವಾಗ ಕೆ.ಸಿ.ಎಸ್.ಆರ್.95(3) ರೀತ್ಯ ಸೇವೆಯಿಂದ ತೆಗೆದುಹಾಕಿರುವುದು ಕ್ರಮಬದ್ಧವಾಗಿರುವುದಿಲ್ಲವೆಂದು ಪರಿಗಣಿಸಿ ದಿನಾಂಕ: 24–8–09ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರದ ದಿನಾಂಕ: 30–6–08ರ ಆದೇಶವನ್ನು ರದ್ದುಪಡಿಸಿ ಅರ್ಜಿದಾರರನ್ನು ಸೇವೆಗೆ ಪುನರ್ ನೇಮಕ ಮಾಡಲಾಗಿದೆ. ಶಿಸ್ತು ಪ್ರಾಧಿಕಾರವು ಕೆ.ಎಸ್.(ಡಿ.ಪಿ) ನಿಯಮಗಳು 1965ರನ್ವಯ ಹೊಸದಾಗಿ ಶಿಕ್ಷಾದೇಶವನ್ನು ಹೊರಡಿಸುವುದು. ಸೇವೆಯಿಂದ ತೆಗೆದುಹಾಕಲಾದ ದಿನದಿಂದ ಪುನರ್ ನೇಮಕಗೊಂಡ ಅವಧಿಯ ಬಗ್ಗೆಯು ಸಹ ಶಿಕ್ಷಾದೇಶದಲ್ಲಿ ಇತ್ಯರ್ಥ ಪಡಿಸುವಂತೆ ಮೇಲೆ ಕ್ರಮ ಸಂಖ್ಯೆ: (4) ರಲ್ಲಿ ಓದಲಾದ ದಿನಾಂಕ: 24/08/2009 ರಲ್ಲಿ ಆದೇಶಿಸಿದ್ದಾರೆ.

ಮೇಲ್ಮನವಿ ಪ್ರಾಧಿಕಾರದ ಆದೇಶದನ್ವಯ ಶಿಸ್ತು ಪ್ರಾಧಿಕಾರವು ಓದಲಾದ ಕ್ರ.ಸಂ.(1) ರ ದಿನಾಂಕ: 20–02–2010 ಮತ್ತು ಕ್ರ.ಸಂ.(2)ರ ದಿನಾಂಕ:28–02–2011ರ ಆದೇಶಗಳಲ್ಲಿ ಕರ್ನಾಟಕ ಪೊಲೀಸ್ ಕಾಯ್ದೆಯ ಕಲಂ 23(ಎ)(2) ರೀತ್ಯಾ ಇವರ ಮುಂದಿನ 4 ವರ್ಷಗಳ ವೇತನ ಬಡ್ತಿಯನ್ನು ನಂತರದ ವೇತನ ಬಡ್ತಿಗೆ ದಕ್ಕೆಯಾಗುವಂತೆ ಮುಂದೂಡಲಾಗಿದೆ. ದಿ:05-6-05 ರಿಂದ 13–7–2007 ರವರೆಗೆ ಕರ್ತವ್ಯಕ್ಕೆ ಗೈರುಹಾಜರಾದ ಅವಧಿಯನ್ನು ಕೆ.ಸಿ.ಎಸ್.ಆರ್. ನಿಯಮ 106(ಎ) ರೀತ್ಯಾ ಸಂಬಳರಹಿತ ರಜೆಯೆಂದು ಸೇವೆಯಿಂದ ಹೊರಗುಳಿದ ಅವಧಿ ದಿ:13–12–08 ರಿಂದ 09–09–09ರವರೆಗಿನ ಅವಧಿಯನ್ನು ಸೇವೆಯಿಂದ ಹೊರಗುಳಿದ ಅವಧಿ ಎಂದು ಪರಿಗಣಿಸಲಾಗಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 69 ಪೊಸಿಅ 2010 ಬೆಂಗಳೂರು, ದಿನಾಂಕ: 05–09–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ನಾಗರಾಜಪ್ರಸಾದ್, ಪಿ.ಸಿ. ಶಿವಾಜಿನಗರ ಪೊಲೀಸ್ ಠಾಣೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಪಿ.ಆರ್.ನಂ. 2186

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ** : ಶ್ರೀ ಆರ್.ಆರ್. ರಾಘವೇಂದ್ರ, ಮಾಜಿ ಎ.ಪಿ.ಸಿ., ಡಿಎಆರ್, ಹಾಸನ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಹಾಸನ ಇವರ ಆದೇಶ ಸಂಖ್ಯೆ: ಸಿಬ್ಬಂದಿ(1)/ಇವಿ–10/09, ಓಬಿ ಸಂಖ್ಯೆ: 67/10 ದಿನಾಂಕ: 22/08/2010
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ:ಅಪೀಲು/40/2010–11, ಓಬಿ ಸಂಖ್ಯೆ: 40/10–11 ದಿನಾಂಕ:04/11/2010
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 15/12/10
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)78/2010–11 ದಿನಾಂಕ: 21/02/2011

**ಪ್ರಸ್ತಾವನೆ:**

ಶ್ರೀ ಆರ್.ಆರ್. ರಾಘವೇಂದ್ರ ಇವರು ಡಿ.ಎ.ಆರ್., ಹಾಸನದಲ್ಲಿ ಎ.ಪಿ.ಸಿ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಕರ್ತವ್ಯದಲ್ಲಿ ತೀವ್ರತರಹದ ನಿರ್ಲಕ್ಷತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ಶ್ರೀ ರಾಘವೇಂದ್ರ ಆರ್.ಆರ್., ಎ.ಪಿ.ಸಿ.–37 ಆದ ನೀವು ಜಿಲ್ಲಾ ಸಶಸ್ತ್ರ ಮೀಸಲುಪಡೆ, ಹಾಸನ ಜಿಲ್ಲೆ, ಹಾಸನದಲ್ಲಿ ಕರ್ತವ್ಯ ನಿರ್ವಹಿಸುತ್ತಿರುತ್ತೀರಿ. ನೀವು ದಿನಾಂಕ: 23–06–2009 ಮತ್ತು 24–6–2009 ರಂದು 2 ದಿನಗಳ ಸಾಂದರ್ಭಿಕ ರಜೆಯ ಮೇಲೆ ತೆರಳಿದ್ದು, ದಿ:25–6–2009 ರಂದು ಕರ್ತವ್ಯಕ್ಕೆ ವರದಿ ಮಾಡಿಕೊಳ್ಳಬೇಕಿತ್ತು. ಆದರೆ ನೀವು ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೆ ಅನಧಿಕೃತವಾಗಿ ಗೈರುಹಾಜರಾಗಿದ್ದು, ನಿಮ್ಮ ಅನಧಿಕೃತ ಗೈರುಹಾಜರಿಯ ಅವಧಿ 21 ದಿನಗಳನ್ನು ಮೀರಿದ್ದರಿಂದ ಪೊಲೀಸ್ ಮ್ಯಾನುಯಲ್ ಆದೇಶ ಸಂಖ್ಯೆ 525ರ ಅನ್ವಯ ನಿಮ್ಮ ವಿರುದ್ಧ ಪೊಲೀಸ್ ಅಧೀಕ್ಷಕರು, ಹಾಸನ ಜಿಲ್ಲೆ, ಹಾಸನ ರವರು ಅಭಿತ್ಯಾಜಕ ನೋಟಿಸ್ ಸಂಖ್ಯೆ: ಸಿಬ್ಬಂದಿ(3)/257/09, ದಿನಾಂಕ:22–7–2009 ರಂದು ಅಭಿತ್ಯಾಜಕ ಪತ್ರವನ್ನು ಜಾರಿ ಮಾಡಿ ಪುನಃ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವ ಇಚ್ಛೆಯಿದ್ದಲ್ಲಿ ಸದರಿ ಅಭಿತ್ಯಾಜಕ ಪತ್ರ ಸ್ವೀಕರಿಸಿದ ನಂತರ ಪೊಲೀಸ್ ಅಧೀಕ್ಷಕರು, ಹಾಸನ ಜಿಲ್ಲೆ, ಹಾಸನರವರ ಮುಂದೆ ಹಾಜರಾಗುವಂತೆ ಸೂಚಿಸಲಾಗಿದ್ದು, ಸದರಿ ಅಭಿತ್ಯಾಜಕ ಪತ್ರವನ್ನು ದಿನಾಂಕ: 28–7–09 ರಂದು ಸ್ವೀಕರಿಸಿ ಇಲ್ಲಿಯವರೆವಿಗೂ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುವುದಿಲ್ಲ. ನೀವು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಕರ್ತವ್ಯದಲ್ಲಿ ತೀವ್ರತರವಾದ ನಿರ್ಲಕ್ಷತನ ಪ್ರದರ್ಶಿಸಿ ಲೋಪವೆಸಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಹಾಸನ ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ: 22/08/2010ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ತೆಗೆದುಹಾಕಲಾಗಿದೆ. ದಿ: 23–6–09 ರಿಂದ 26–12–09ರ ವರೆಗಿನ (ದಿ: 23–6–09 ರಿಂದ 24–6–09 ರಂದು 2 ದಿನಗಳ ಸಾಂದರ್ಭಿಕ ರಜೆ ಸೇರಿದಂತೆ) ಅವಧಿಯನ್ನು 'ವೇತನ ರಹಿತ ರಜೆ' ಎಂದು ಪರಿಗಣಿಸುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 04/11/2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 194 ಪೊಸಿಅ 2010, ಬೆಂಗಳೂರು, ದಿನಾಂಕ: 05–09–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಆರ್.ಆರ್. ರಾಘವೇಂದ್ರ, ಮಾಜಿ, ಎ.ಪಿ.ಸಿ., ಡಿಎಆರ್, ಹಾಸನ ಇವರು, ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್.ನಂ. 2187

## ಒಳಾಡಳಿತ ಸಚಿವಾಲಯ

**ವಿಷಯ** : ನಕಲಿ ಛಾಪಾಕಾಗದದ ಹಗರಣಗಳಿಗೆ ಸಂಬಂಧಿಸಿದಂತೆ ತಪ್ಪಿತಸ್ಥ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಮಂಡನಾಧಿಕಾರಿಯನ್ನು ಬದಲಾಯಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ: ಒಇ 23 ಪೊಸಿಪ 2004 ದಿನಾಂಕ 23–01–2004, 07–01–2005, 11–12–2006.
2. ಸರ್ಕಾರದ ಆದೇಶ ಸಂಖ್ಯೆ: ಒಇ 23 ಪೊಸಿಪ 2004 ದಿನಾಂಕ 28–03–008.
3. ಸರ್ಕಾರದ ಆದೇಶ ಸಂಖ್ಯೆ: ಒಇ 23 ಪೊಸಿಪ 2004 ದಿನಾಂಕ 13–05–2009.
4. ಸರ್ಕಾರದ ಆದೇಶ ಸಂಖ್ಯೆ: ಒಇ 23 ಪೊಸಿಪ 2004 ದಿನಾಂಕ 09–08–2010.
5. ಪೊಲೀಸ್ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ರವರ ಕಛೇರಿ ಪತ್ರ ಸಂಖ್ಯೆ: ಸಿಬಿ(5)25.03.04 ದಿನಾಂಕ 09–08–2010.

6. ಪೊಲೀಸ್ ಮಹಾ ನಿರ್ದೇಶಕ ರವರ ಪತ್ರ ಸಂಖ್ಯೆ:ಸಿಬಿ(5) 25/2003–04 ದಿನಾಂಕ 04–08–2011.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶಗಳಲ್ಲಿ ಕೆ.ಎಸ್.ಪಿ (ಡಿ.ಪಿ) ನಿಯಮಗಳು, 1965ರ ನಿಯಮ 6 ಮತ್ತು 8ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ನಕಲಿ ಛಾಪಾ ಕಾಗದದ ಹಗರಣಗಳಿಗೆ ಸಂಬಂಧಿಸಿದಂತೆ ಕರ್ತವ್ಯ ನಿರ್ಲಕ್ಷ್ಯ ತೋರಿದ ಅಧಿಕಾರಿಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು (ನೇಮಕಾತಿ ಮತ್ತು ತರಬೇತಿ) ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ತದನಂತರ ಸದರಿಯವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದ ಆದೇಶವನ್ನು ಭಾಗಶಃ ಮಾರ್ಪಡಿಸಿ ಶ್ರೀ ಎಸ್.ಟಿ. ರಮೇಶ್, ಐಪಿಎಸ್, ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು ರವರನ್ನು ವಿಶೇಷ ಅಧಿಕಾರ ಹೊಂದಿದ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು ರವರ ಕೋರಿಕೆಯಂತೆ ಶ್ರೀ ಬಿ. ದಯಾನಂದ, ಐಪಿಎಸ್, ಪೊಲೀಸ್ ಉಪ ಮಹಾ ನಿರೀಕ್ಷಕರು, ಅಗ್ನಿಶಾಮಕ ಸೇವೆ, ಬೆಂಗಳೂರು ರವರನ್ನು ನಕಲಿ ಛಾಪಾ ಕಾಗದದ ಹಗರಣಗಳಿಗೆ ಸಂಬಂಧಿಸಿದಂತೆ ಕರ್ತವ್ಯ ನಿರ್ಲಕ್ಷ್ಯ ತೋರಿದ ಅಧಿಕಾರಿಗಳ ವಿರುದ್ಧದ ಜಂಟಿ ಇಲಾಖಾ ವಿಚಾರಣೆಯಲ್ಲಿ ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ಮೇಲೆ (3) ರಲ್ಲಿ ಓದಲಾದ ಆದೇಶದಲ್ಲಿ ಸದರಿ ಪ್ರಕರಣದ ಜಂಟಿ ಇಲಾಖೆ ವಿಚಾರಣಾಧಿಕಾರಿ ಶ್ರೀ ಎಸ್.ಟಿ. ರಮೇಶ್, ಐಪಿಎಸ್, ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು ರವರ ಬದಲಿಗೆ ಶ್ರೀ ಕೆ. ರಾಮಕೃಷ್ಣ ಭಟ್ (ನಿವೃತ್ತ) ನ್ಯಾಯಾಧೀಶರನ್ನು ಬದಲಿ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಮೇಲೆ (4)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಕೆ. ರಾಮಕೃಷ್ಣ ಭಟ್ (ನಿವೃತ್ತ) ನ್ಯಾಯಾಧೀಶರ ಕೋರಿಕೆಯಂತೆ ಅವರನ್ನು ಬದಲಾಯಿಸಿ, ಶ್ರೀ ಶಿವರಾಮ್ ಕೆ (ನಿವೃತ್ತ) ಜಿಲ್ಲಾ ನ್ಯಾಯಾಧೀಶರನ್ನು ಬದಲಿ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ (5) ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಬಿ. ದಯಾನಂದ, ಐಪಿಎಸ್ ರವರು ತಮ್ಮ ಮನವಿಯಲ್ಲಿ ಇದೊಂದು ಜಟಿಲವಾದ ಇಲಾಖಾ ವಿಚಾರಣೆ ಆಗಿದ್ದು ಪ್ರಕರಣದಲ್ಲಿ 65ಕ್ಕೂ ಹೆಚ್ಚು ಸಾಕ್ಷಿದಾರರ ವಿಚಾರಣೆ ದೈನಂದಿನವಾಗಿ ಆಗಬೇಕಾಗಿದ್ದು ಇದು ಪೂರ್ಣಗೊಳಿಸಲು ಸಾಕಷ್ಟು ಸಮಯ ತೆಗೆದುಕೊಳ್ಳುವ ಸಂಭವವಿದ್ದು ರಾಜ್ಯ ಗುಪ್ತವಾರ್ತೆಯಲ್ಲಿ ತಮಗೆ ಕೆಲಸದ ಒತ್ತಡ ಇರುವುದರಿಂದ ಸದರಿ ಇಲಾಖೆ ವಿಚಾರಣೆಯನ್ನು ನಡೆಸುವುದು ಕಷ್ಟಕರವಾಗಿರುವುದರಿಂದ ಬೇರೊಬ್ಬ ಅಧಿಕಾರಿಯನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿಕೊಳ್ಳಲು ಕೋರಿರುತ್ತಾರೆ. ಈ ಹಿನ್ನೆಲೆಯಲ್ಲಿ ಸಹಾಯಕ ಇನ್‌ಸ್ಪೆಕ್ಟರ್ ಜನರಲ್ ಆಫ್ ಪೊಲೀಸ್ (ಸಾಮಾನ್ಯ) ಪ್ರಧಾನ ಕಛೇರಿ, ಬೆಂಗಳೂರು ರವರನ್ನು ಬದಲಿ ಮಂಡನಾಧಿಕಾರಿಯನ್ನಾಗಿ ನೇಮಿಸುವಂತೆ ಡಿಜಿ ಮತ್ತು ಐಜಿಪಿ ರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 23 ಪೊಸಿಪ 2004 ಬೆಂಗಳೂರು, ದಿನಾಂಕ:05–09–2011**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಸರ್ಕಾರದ ಆದೇಶ ಸಂಖ್ಯೆ. ಒಇ 23 ಪೊಸಿಪ 2004 ದಿನಾಂಕ 28–03–2008ನ್ನು ಭಾಗಶಃ ಮಾರ್ಪಡಿಸಿ ಶ್ರೀ ಬಿ. ದಯಾನಂದ, ಐಪಿಎಸ್, ಡಿ.ಐ.ಜಿ.ಪಿ, ಪೊಲೀಸ್ ಉಪ ಮಹಾ ನಿರೀಕ್ಷಕರು, ಅಗ್ನಿಶಾಮಕ ಸೇವೆ, ಬೆಂಗಳೂರು ರವರ ಬದಲಿಗೆ ಸಹಾಯಕ ಇನ್‌ಸ್ಪೆಕ್ಟರ್ ಜನರಲ್ ಆಫ್ ಪೊಲೀಸ್ (ಸಾಮಾನ್ಯ) ಪ್ರಧಾನ ಕಛೇರಿ, ಬೆಂಗಳೂರು ರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ದಿನಾಂಕ 10–02–2005ರ ಆದೇಶದಲ್ಲಿನ ಉಳಿದ ಇತರೆ ಆದೇಶಗಳು ಯಥಾವತ್ತಾಗಿ ಮುಂದುವರೆಯುತ್ತದೆ. ವಿಚಾರಣೆಯನ್ನು ಮೂರು ತಿಂಗಳ ಒಳಗಾಗಿ ಪೂರ್ಣಗೊಳಿಸಿ ವರದಿ ಮಾಡುವಂತೆ ವಿಚಾರಣಾಧಿಕಾರಿಗಳಿಗೆ (ಸೂಕ್ತ ಸೌಲಭ್ಯಗಳನ್ನು ಒದಗಿಸಿ) ಸೂಕ್ತ ಮಾರ್ಗದರ್ಶನ ನೀಡುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್.ನಂ. 2188

## ಒಳಾಡಳಿತ ಸಚಿವಾಲಯ

**ವಿಷಯ** : ಬಳ್ಳಾರಿ ಜಿಲ್ಲೆ ಸಂಡೂರಿನ ಸಿಜೆ ಮತ್ತು ಜೆಎಂಎಫ್‌ಸಿ ನ್ಯಾಯಾಲಯವು ಸಿಸಿ ಸಂಖ್ಯೆ: 569/08 ರಲ್ಲಿ ಹೊರಡಿಸಿದ ಸಮನ್ಸ್ ಮತ್ತು ನಾನ್–ಬೇಲಬಲ್ ವಾರಂಟ್‌ಗಳನ್ನು ಜಾರಿಗೊಳಿಸಲು ವಿಫಲರಾದ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಓದಲಾಗಿದೆ** : 1. ಸರ್ಕಾರದ ಆದೇಶ ಸಂಖ್ಯೆ: ಒಇ 209 ಪೊಸಿಪ 2011 ದಿನಾಂಕ: 07–07–2011.

**ಪ್ರಸ್ತಾವನೆ:**

ಮೇಲೆ ಓದಲಾದ ಆದೇಶದಲ್ಲಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪತ್ರದಲ್ಲಿ ಬಳ್ಳಾರಿ ಜಿಲ್ಲೆ ಸಂಡೂರಿನ ಸಿಜೆ ಮತ್ತು ಜೆಎಂಎಫ್‌ಸಿ ನ್ಯಾಯಾಲಯವು ಸಿಸಿ ಸಂಖ್ಯೆ: 569/2008ರಲ್ಲಿ ಶ್ರೀ ಜನಾರ್ಧನ ರೆಡ್ಡಿ ರವರ ವಿರುದ್ಧ ದಿನಾಂಕ: 18–07–2008 ರಂದು ಹಾಗೂ ತದನಂತರ 13 ಬಾರಿ ಹೊರಡಿಸಿದ ಸಮನ್ಸ್ ಅನ್ನು ಹಾಗೂ ದಿನಾಂಕ: 08–01–2010 ರಂದು ಮತ್ತು ತದನಂತರ 8 ಬಾರಿ ಹೊರಡಿಸಿ ನಾನ್–ಬೇಲಬಲ್ ವಾರಂಟ್ ಅನ್ನು ಪ್ರಕರಣದ ಶ್ರೀ ಜನಾರ್ಧನ ರೆಡ್ಡಿ ರವರಿಗೆ ಎ–2 ಜಾರಿಗೊಳಿಸುವ ಬಗ್ಗೆ ಸೂಕ್ತ ನಿರ್ದೇಶನವನ್ನು ಅಧೀನಾಧಿಕಾರಿಗಳಿಗೆ ನೀಡುವಲ್ಲಿ ವಿಫಲರಾಗಿರುವ ಹಾಗೂ ಕಾಲಕಾಲಕ್ಕೆ ವಾರಂಟ್ ಅನ್ನು ಜಾರಿಗೊಳಿಸುವ ಬಗ್ಗೆ ಡಿಜಿ ಮತ್ತು ಐಜಿಪಿ ರವರ ಸುತ್ತೋಲೆ ಸಂಖ್ಯೆ: ಅಪರಾಧ/267/ಮಿಶ್ರ–1/2008 ದಿನಾಂಕ: 06–11–2008, ಅಪರಾಧ/107/ಮಿಶ್ರ–1/2009 ದಿನಾಂಕ: 01–07–2009 ಮತ್ತು

ಅಪರಾಧ/26/ಮಿಶ್ರ–1/1999 ದಿನಾಂಕ: 07–07–1999 ಗಳನ್ನು ಹಾಗೂ ಪೊಲೀಸ್ ಮ್ಯಾನುಯಲ್ ಆದೇಶ 976ನ್ನು ಉಲ್ಲಂಘಿಸಿ, ಕರ್ತವ್ಯಲೋಪ, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವ ಶ್ರೀ ಅಶೋಕ್ ಕುರೇರ್, ಹಿಂದಿನ ಅಡಿಷನಲ್ ಎಸ್.ಪಿ. ಬಳ್ಳಾರಿ ಮತ್ತಿತರರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ಮತ್ತು 8 ರನ್ವಯ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಲಾಗಿರುತ್ತದೆ. ಮುಂದುವರೆದು ಸದರಿ ಪ್ರಕರಣದಲ್ಲಿ ಭಾಗಿಯಾದಂತಹ ಅಧೀನ ಅಧಿಕಾರಿಗಳಾದ ಶ್ರೀ ವೈ.ಹೆಚ್ ರಮಾಕಾಂತ್, ಪಿ.ಐ. ಸಂಡೂರು, ಶ್ರೀ ಎಂ.ಉಮೇಶ್, ಪಿ.ಎಸ್.ಐ. ತೋರಣಗಲ್, ಶ್ರೀ ಸೂರ್ಯನಾರಾಯಣ, ಸಿ.ಪಿ.ಸಿ., ತೋರಣಗಲ್ ಪೊಲೀಸ್ ಠಾಣೆ, ಬಳ್ಳಾರಿ ಜಿಲ್ಲೆ ರವರುಗಳ ವಿರುದ್ಧ ಶಿಸ್ತು ಕ್ರಮ ಬಾಕಿ ಇರಿಸಿ ಈಗಾಗಲೇ ಸೇವೆಯಿಂದ ಅಮಾನತ್ತುಗೊಳಿಸಿ ಪೊಲೀಸ್ ಮಹಾ ನಿರ್ದೇಶಕರು ಆದೇಶಿಸಿರುತ್ತಾರೆ.

ಸದರಿ ಪ್ರಕರಣದಲ್ಲಿ ಶ್ರೀ ಜಿ.ಆರ್. ಮೋಹನ್ ಎನ್ನುವವರು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 2100/2011 ದಾಖಲಿಸಿದ್ದು, ಪ್ರಕರಣವು ದಿನಾಂಕ: 24–08–2011 ರಂದು ವಿಚಾರಣೆಗೆ ಬಂದಿದ್ದು, ಪ್ರಕರಣದಲ್ಲಿ ಭಾಗಿಯಾಗಿದ್ದ ಎಲ್ಲಾ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಹಾಗೂ ಸೇವೆಯಿಂದ ಅಮಾನತ್ತುಗೊಳಿಸಲು ಉಚ್ಚ ನ್ಯಾಯಾಲಯವು ವಿಶೇಷ ಆದೇಶ ನೀಡಿರುತ್ತದೆ. ಮುಂದುವರೆದು, ರಾಜ್ಯ ಪೊಲೀಸ್ ಅಧಿಕಾರಿಗಳನ್ನು ಸೇವೆಯಿಂದ ಅಮಾನತ್ತುಗೊಳಿಸಿ ಶಿಸ್ತಿನ ಕ್ರಮ ಜರುಗಿಸಲು ವಿಶೇಷ ಆದೇಶ ನೀಡಿದೆ. ಪ್ರಕರಣದಲ್ಲಿ ಭಾಗಿಯಾದಂತಹ ಮೂವರು ಪೊಲೀಸ್ ಅಧಿಕಾರಿಗಳಾದ ಶ್ರೀ ವೈ.ಹೆಚ್. ರಮಾಕಾಂತ್, ಪಿ.ಐ. ಸಂಡೂರು, ಶ್ರೀ ಎಂ. ಉಮೇಶ್, ಪಿ.ಎಸ್.ಐ. ತೋರಣಗಲ್, ಶ್ರೀ ಸೂರ್ಯನಾರಾಯಣ, ಸಿ.ಪಿ.ಸಿ., ತೋರಣಗಲ್ ಪೊಲೀಸ್ ಠಾಣೆ, ಬಳ್ಳಾರಿ ಜಿಲ್ಲೆ ರವರುಗಳನ್ನು ಡಿ.ಜಿ. ಮತ್ತು ಐಜಿಪಿ ರವರು ಸೇವೆಯಿಂದ ಅಮಾನತ್ತುಗೊಳಿಸಿರುತ್ತಾರೆ. ಇನ್ನುಳಿದ ರಾಜ್ಯ ಪೊಲೀಸ್ ಸೇವೆಯ ಇಬ್ಬರು ಅಧಿಕಾರಿಗಳಾದ ಶ್ರೀ ಹೆಚ್.ವೈ. ತುರಾಯಿ, ಡಿವೈ.ಎಸ್.ಪಿ. ಮತ್ತು ಶ್ರೀ ಅಶೋಕ್ ಕುರೇರ್, ಎಸ್.ಪಿ., ರಾಜ್ಯ ಗುಪ್ತವಾರ್ತೆ ರವರುಗಳನ್ನು ತಕ್ಷಣದಿಂದ ಶಿಸ್ತು ಕ್ರಮ ಬಾಕಿ ಇರಿಸಿ ಸೇವೆಯಿಂದ ಅಮಾನತ್ತಿನಲ್ಲಿಡಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 209 ಪೊಸಿಪ 2011 ಬೆಂಗಳೂರು, ದಿನಾಂಕ: 30–08–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 5(1) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಅಶೋಕ್ ಕುರೇರ್, (ಈ ಹಿಂದೆ ಅಡಿಷನಲ್ ಎಸ್.ಪಿ., ಬಳ್ಳಾರಿ) ಹಾಲಿ ಎಸ್.ಪಿ., ರಾಜ್ಯ ಗುಪ್ತವಾರ್ತೆ, ಬೆಳಗಾವಿ ಮತ್ತು ಶ್ರೀ ಹೆಚ್.ವೈ. ತುರಾಯಿ, (ಈ ಹಿಂದೆ ಡಿವೈ.ಎಸ್.ಪಿ. ಕೂಡ್ಲಿಗಿ ಉಪ ವಿಭಾಗ) ಹಾಲಿ ಡಿವೈ.ಎಸ್.ಪಿ. ರಾಜ್ಯ ಗುಪ್ತ ವಾರ್ತೆ, ರಾಯಚೂರು ರವರುಗಳ ವಿರುದ್ಧದ ಶಿಸ್ತು ಕ್ರಮ ಬಾಕಿ ಇರಿಸಿ ಈ ಕೂಡಲೇ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಅಶೋಕ್ ಕುರೇರ್, (ಈ ಹಿಂದೆ ಅಡಿಷನಲ್ ಎಸ್.ಪಿ., ಬಳ್ಳಾರಿ) ಹಾಲಿ ಎಸ್.ಪಿ., ರಾಜ್ಯ ಗುಪ್ತ ವಾರ್ತೆ, ಬೆಳಗಾವಿ ಮತ್ತು ಶ್ರೀ ಹೆಚ್.ವೈ.ತುರಾಯಿ, (ಈ ಹಿಂದೆ ಡಿವೈ.ಎಸ್.ಪಿ. ಕೂಡ್ಲಿಗಿ ಉಪ ವಿಭಾಗ) ಹಾಲಿ ಡಿ.ವೈ.ಎಸ್.ಪಿ., ರಾಜ್ಯ ಗುಪ್ತ ವಾರ್ತೆ, ರಾಯಚೂರು ರವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98 ರನ್ವಯ ಜೀವನಾಧಾರ ಭತ್ಯೆಯನ್ನು ನೀಡತಕ್ಕದ್ದು. ಅಮಾನತ್ತಿನ ಅವಧಿಯಲ್ಲಿ ಸಕ್ಷಮ ಪ್ರಾಧಿಕಾರದ ಅನುಮತಿ ಪಡೆಯದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್.ನಂ. 2189

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

## ತಿದ್ದೋಲೆ

**ಸಂಖ್ಯೆ: ಪಿಡಿ 83 ಎಸ್‌ಎಂಸಿ 2011(1), ಬೆಂಗಳೂರು, ದಿನಾಂಕ: 30/08/2011**

ಸರ್ಕಾರದ ಆದೇಶ ಸಂಖ್ಯೆ: ಪಿಡಿ 83 ಎಸ್‌ಎಂಸಿ 2011(1) ದಿನಾಂಕ: 21/07/2011ರ ಆದೇಶ ಭಾಗದಲ್ಲಿ,

1. ತಾಲ್ಲೂಕು ಮಟ್ಟದ ಉಸ್ತುವಾರಿ ಸಮಿತಿ ಶೀರ್ಷಿಕೆಯಡಿ ಕ್ರಮ ಸಂಖ್ಯೆ 4 ರಲ್ಲಿರುವ "ಮುಖ್ಯಾಧಿಕಾರಿ, ನಗರಸಭೆ/ಪುರಸಭೆ/ತಾಲ್ಲೂಕುಪಂಚಾಯತ್/ಅಧಿಸೂಚಿತ ಪ್ರದೇಶ" ಎಂಬ ಪದಗಳಿಗೆ ಬದಲಾಗಿ "ಮುಖ್ಯಾಧಿಕಾರಿ, ನಗರಸಭೆ/ಪುರಸಭೆ/ಪಟ್ಟಣ ಪಂಚಾಯತ್/ಅಧಿಸೂಚಿತ ಪ್ರದೇಶ" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ವಿ ರಾಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ (ಎಸ್–5)

ಪಿ.ಆರ್. 2190

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಡಾ: ಆರ್. ಗೋಪಾಲ್, ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿಡುವ ಕುರಿತು.

**ಓದಲಾಗಿದೆ :** ಕನ್ನಡ ಸಂಸ್ಕೃತಿ ಮತ್ತು ವಾರ್ತಾ ಇಲಾಖೆ ಕಡತ ಸಂಖ್ಯೆ ಕಸಂವಾಪ್ರ 175 ಕೆಎಂಯು 2011

**ಪ್ರಸ್ತಾವನೆ :**

ಡಾ: ಆರ್. ಗೋಪಾಲ್, ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ, ಮೈಸೂರು ಇವರು ಮೈಸೂರಿನ ಕೇಂದ್ರ ಕಛೇರಿಯಲ್ಲಿರುವ ಅಡಿಟೋರಿಯಂನ್ನು ಸರ್ಕಾರದಿಂದ ಯಾವುದೇ ಮಂಜೂರಾತಿ ಪಡೆಯದೇ ಹಾಗೂ ಅಂದಾಜು ಪತ್ರಿಕೆ ತಯಾರಿಸಿದೇ ನವೀಕರಿಸುವ

ಕಾಮಗಾರಿಯನ್ನು 2010ರಲ್ಲಿಯೇ ನಿರ್ವಹಿಸಿ ಕಾಮಗಾರಿ ಮುಗಿದ ನಂತರ ಈ ವರ್ಷ ಇಲಾಖೆಯ ಇಂಜಿನಿಯರ್‌ಗಳಿಗೆ ಕಾಮಗಾರಿಯ ಅಂದಾಜು ಪತ್ರಿಕೆಯನ್ನು ಸಿದ್ದಪಡಿಸಿ ಈ ಕಾಮಗಾರಿಯ ಗುತ್ತಿಗೆದಾರರಿಗೆ ಬಿಲ್ಲು ಸಂದಾಯ ಮಾಡಲು ಸಂಚು ರೂಪಿಸಿರುವುದರಿಂದ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವಂತೆ ಶ್ರೀ ವರದರಾಜು, ಸಿದ್ಧಾರ್ಥನಗರ ಮೈಸೂರು, ಇವರು ದೂರು ಸಲ್ಲಿಸಿರುವ ಮೇರೆಗೆ ಸರ್ಕಾರದ ಉಪ ಕಾರ್ಯದರ್ಶಿ, ಕನ್ನಡ, ಸಂಸ್ಕೃತಿ ವಾರ್ತಾ ಮತ್ತು ಪ್ರವಾಸೋಧ್ಯಮ ಇಲಾಖೆ ಇವರು ಪ್ರಾಥಮಿಕ ತನಿಖೆಯನ್ನು ನಡೆಸಿ ತನಿಖಾ ವರದಿಯನ್ನು ಸಲ್ಲಿಸಿ, ಅದರಲ್ಲಿ ಡಾ: ಆರ್. ಗೋಪಾಲ್, ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ, ಇವರು "ಮೈಸೂರಿನ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆಯ ಕೇಂದ್ರ ಕಛೇರಿಯ ಆಡಿಟೋರಿಯಂನ್ನು 2010ನೇ ಸಾಲಿನಲ್ಲಿ ಎಲ್ಲಾ ರೀತಿಯಲ್ಲೂ ಸಜ್ಜುಗೊಳಿಸಿ ನಿರ್ಮಿಸಲಾಗಿದೆ. ಈ ರೀತಿ ಕೇಂದ್ರ ಕಛೇರಿಯ ಆಡಿಟೋರಿಯಂ ಕಾಮಗಾರಿ ನಿರ್ವಹಿಸಿದ ಸಂದರ್ಭದಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ಹಾಗೂ 2000 ನಿಯಮಗಳನ್ನು ಪರಿಶೀಲಿಸದೇ ಕಾಮಗಾರಿಯ ಬಗ್ಗೆ ಟೆಂಡರ್ ಕರೆಯದೇ ನಿರ್ವಹಿಸಿರುವುದು ತಿಳಿದು ಬಂದಿರುವುದರಿಂದಲು; ಈಗಾಗಲೇ ನಿರ್ವಹಿಸಿದ ಕಾಮಗಾರಿಯನ್ನು ಸಕ್ರಮಗೊಳಿಸುವ ಬಗ್ಗೆ ಅಂದಾಜು ಪಟ್ಟಿಯನ್ನು ಸಿದ್ದಪಡಿಸಿ ತಾಂತ್ರಿಕ ಸಲಹಾ ಸಮಿತಿಯ ಅನುಮೋದನೆ ಪಡೆದು ಕಾಮಗಾರಿಯನ್ನು ನಿರ್ವಹಿಸಲು ತರಾತುರಿಯಲ್ಲಿ ಟೆಂಡರನ್ನು ದಿನಾಂಕ: 08/07/2011 ರಂದು ಪತ್ರಿಕಾ ಪ್ರಕಟಣೆಯಲ್ಲಿ ಕರೆದು ಕಾಮಗಾರಿಯ ಸಕ್ರಮಗೊಳಿಸುವ ಅಂಶವು ಕಂಡುಬರುವುದರಿಂದಲೂ ಹಾಗೂ ಟೆಂಡರ್ ಕರೆಯದೇ ಪೂರ್ವಾನುಮತಿ ಪಡೆಯದೇ ಟೆಂಡರ್ ಪ್ರಕಟಣೆ ಹೊರಡಿಸಿರುವುದು ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆಯ ಅಧಿನಿಯಮಕ್ಕೆ ವಿರುದ್ಧವಾಗಿರುವುದರಿಂದಲು ನಿರ್ಮಿಸಿರುವ ಆಡಿಟೋರಿಯಂನ ಕೆಲವೊಂದು ಉಪಕರಣಗಳನ್ನು ತೆಗೆದು ಹಾಕಿರುವುದಾಗಿ ಪುರಾತತ್ವ ಸಂರಕ್ಷಣಾ ಇಂಜಿನಿಯರ್ ಅವರು ದಿನಾಂಕ: 18/07/2011 ರಂದು ಸಲ್ಲಿಸಿರುವ ಹೇಳಿಕೆಯಲ್ಲಿ ತಿಳಿಸಿರುವುದರಿಂದಲೂ ಈ ಕಾಮಗಾರಿಯಲ್ಲಿ ಅವ್ಯವಹಾರ ಎಸಗಿ ಸರ್ಕಾರಕ್ಕೆ ತಪ್ಪು ಮಾಹಿತಿಯನ್ನು ನೀಡುವ ಮೂಲಕ ಕಾಮಗಾರಿ ನಿರ್ವಹಣೆಯನ್ನು ಸಕ್ರಮಗೊಳಿಸಲು ಪ್ರಯತ್ನಿಸುತ್ತಿರುವುದು ಕಂಡುಬರುವುದರಿಂದ ಪ್ರಕರಣದ ಸತ್ಯಾಸತ್ಯತೆಯನ್ನು ಪರಿಶೀಲಿಸಲು ಸದರಿ ಅಧಿಕಾರಿಗೆ ನೋಟೀಸ್ ಜಾರಿ ಮಾಡುವ ಮೂಲಕ ಇಲಾಖಾ ವಿಚಾರಣೆ ನಡೆಸಲು ತಮ್ಮ ವರದಿಯಲ್ಲಿ ತಿಳಿಸಲಾಗಿದೆ.

ಮೇಲ್ಕಂಡ ದುರ್ನಡತೆಗಾಗಿ ಡಾ: ಆರ್. ಗೋಪಾಲ್ ನಿರ್ದೇಶಕರು, ಅವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ಅನ್ವಯ ಶಿಸ್ತುಕ್ರಮವನ್ನು ಜರುಗಿಸಲು ಸರ್ಕಾರವು ಉದ್ದೇಶಿಸಿರುವುದರಿಂದಲೂ, ಶಿಸ್ತಿನ ಕ್ರಮವನ್ನು ಬಾಕಿ ಇಟ್ಟು ಡಾ: ಆರ್. ಗೋಪಾಲ್, ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ, ಇವರನ್ನು ಅಮಾನತ್ತಿನಲ್ಲಿಡುವುದು ಅಗತ್ಯವೆಂದು ಸರ್ಕಾರವು ಭಾವಿಸಿರುವುದರಿಂದಲೂ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 09 ಇಮುವಿ 2011, ಬೆಂಗಳೂರು, ದಿನಾಂಕ: 06/09/2011**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ನಿಯಮ 10(1)(ಡಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಡಾ: ಆರ್. ಗೋಪಾಲ್, ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ, ಇವರನ್ನು ಅವರ ವಿರುದ್ಧದ ಶಿಸ್ತಿನ ಕ್ರಮವನ್ನು ಬಾಕಿ ಇಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡಲಾಗಿದೆ.

ಅಮಾನತ್ತಿನ ಅವಧಿಯಲ್ಲಿ ಡಾ: ಆರ್. ಗೋಪಾಲ್, ನಿರ್ದೇಶಕರು, ಅವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 98ನೇ ನಿಯಮದ ಅನ್ವಯ ಜೀವನಾಧಾರ ಭತ್ಯೆಯನ್ನು ಪಡೆಯುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಡಾ: ಆರ್. ಗೋಪಾಲ್, ನಿರ್ದೇಶಕರು, ಅವರು ತಾವು ಕಾರ್ಯನಿರ್ವಹಿಸುವ ಕೇಂದ್ರ ಸ್ಥಾನವನ್ನು ಸಕ್ಷಮ ಪ್ರಾಧಿಕಾರಿಯ ಅನುಮತಿ ಪಡೆಯದೇ ಬಿಡತಕ್ಕದ್ದಲ್ಲ.

ಡಾ: ಆರ್. ಗೋಪಾಲ್ ನಿರ್ದೇಶಕರು, ಅವರ ಸ್ಥಾನದಲ್ಲಿ ಶ್ರೀ ಹೆಚ್.ಎಂ. ಸಿದ್ದನಗೌಡರ್, ಉಪ ನಿರ್ದೇಶಕರು ಬೆಂಗಳೂರು ವಿಭಾಗ ಇವರನ್ನು ಪ್ರಭಾರಿ ನಿರ್ದೇಶಕರಾಗಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಆರ್. ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವೆಗಳು-3)

ಪಿ.ಆರ್. 2191

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯಪಾಲರ ಸಚಿವಾಲಯದಲ್ಲಿ ತಾತ್ಕಾಲಿಕವಾಗಿ 2 ವರ್ಷಗಳ ಅವಧಿಗೆ ವೇತನ ಶ್ರೇಣಿ ರಹಿತ ರಾಜ್ಯಪಾಲರ ಕಾನೂನು ಸಲಹೆಗಾರರ ಹುದ್ದೆಯನ್ನು ಸೃಜಿಸುವ ಮತ್ತು ಶ್ರೀ ಎಂ.ಆರ್. ಹೆಗಡೆ, ನಿವೃತ್ತ ರಾಜ್ಯ ಚುನಾವಣಾ ಆಯುಕ್ತರು ಇವರನ್ನು ಸದರಿ ಹುದ್ದೆಗೆ ಮರುನೇಮಕಾತಿ ಮಾಡುವ ಕುರಿತು.

**ಓದಲಾಗಿದೆ :** ಕರ್ನಾಟಕ ರಾಜ್ಯಪಾಲರ ಪ್ರಧಾನ ಕಾರ್ಯದರ್ಶಿ, ರಾಜಭವನ, ಬೆಂಗಳೂರುರವರ ಅ.ಸ.ಪತ್ರ ಸಂಖ್ಯೆ: GS 77 EST 2011, ದಿನಾಂಕ: 18/08/2011.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ, ಆಗ್ಗಿಂದಾಗ್ಗೆ ಘನತೆವೆತ್ತ ರಾಜ್ಯಪಾಲರ ಪರಿಗಣನೆಗೆ ಬರುವ ವಿಷಯಗಳ ಕುರಿತು ಸೂಕ್ತವಾದ ಕಾನೂನು ಪರಿಶೀಲನೆಯ ಅವಶ್ಯಕತೆ ಇದೆ ಎಂದು ಹಾಗೂ ರಾಜ್ಯಪಾಲರ ಸಚಿವಾಲಯ ಸೇವೆಯಲ್ಲಿ ಕಾನೂನು ಅಧಿಕಾರಿಯ ಹುದ್ದೆಯು ಇರುವುದಿಲ್ಲವೆಂದು, ಎರಡು ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಕಾನೂನು ಸಲಹೆಗಾರರಾಗಿ ಶ್ರೀ ಎಂ.ಆರ್. ಹೆಗಡೆ, ಹಿಂದಿನ ಕಾನೂನು ಕಾರ್ಯದರ್ಶಿ ಮತ್ತು

ಹಿಂದಿನ ಚುನಾವಣಾ ಆಯುಕ್ತರ ಇವರ ಸೇವೆಯನ್ನು ಪಡೆಯಲು ಸರ್ಕಾರವು ಸೂಚಿಸುವ ಷರತ್ತು ಮತ್ತು ನಿಬಂಧನೆಗೊಳಪಟ್ಟು ನೇಮಕಾತಿ ಮಾಡುವಂತೆ ಘನತೆವೆತ್ತ ರಾಜ್ಯಪಾಲರು ಸೂಚಿಸಿರುವರೆಂದು ತಿಳಿಸಲಾಗಿದೆ.

ಸದರಿ ಪತ್ರದಲ್ಲಿಯ ಶ್ರೀ ಎಂ.ಆರ್.ಹೆಗಡೆ ಇವರ ಸೇವಾ ವಿವರಗಳನ್ನು ಒದಗಿಸಿದ್ದು, ಇವರು ದಿನಾಂಕ: 13/10/1978ರಲ್ಲಿ ಕರ್ನಾಟಕ ನ್ಯಾಯಾಂಗ ಸೇವೆಗೆ ಸೇರಿದ್ದು ಜನವರಿ 1996ರಲ್ಲಿ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ಕಾರ್ಯದರ್ಶಿಯಾಗಿ ನೇಮಕಾತಿಯಾಗಿ ದಿನಾಂಕ: 21/06/2004 ರವರೆಗೆ ಸೇವೆ ಸಲ್ಲಿಸಿದ್ದು, ಸದರಿ ದಿನಾಂಕದಿಂದ ರಾಜ್ಯ ಚುನಾವಣಾ ಆಯುಕ್ತರಾಗಿ ನೇಮಕಾತಿಯಾಗಿ 21/06/2009ರವರೆಗೆ ಕಾರ್ಯನಿರ್ವಹಿಸಿರುತ್ತಾರೆ. ಕರ್ನಾಟಕ ರಾಜ್ಯ ಚುನಾವಣಾ ಆಯುಕ್ತರ (ಸೇವಾ ಷರತ್ತುಗಳ) ನಿಯಮಗಳು, 2006 ನಿಯಮ 3ರನ್ವಯ ರಾಜ್ಯ ಚುನಾವಣಾ ಆಯುಕ್ತರಿಗೆ ಉಚ್ಚ ನ್ಯಾಯಾಲಯದ ನ್ಯಾಯಾಧೀಶರ ಸಂಬಳಕ್ಕೆ ಸಮನಾದ ಸಂಬಳವನ್ನು ಪಡೆಯತಕ್ಕದೆಂದು ನಿಗದಿಪಡಿಸಲಾಗಿರುತ್ತದೆ. ಇವರು ನಿವೃತ್ತ ಸಮಯದಲ್ಲಿ ರೂ. 80,000/– ಮೂಲ ವೇತನ ಪಡೆಯುತ್ತಿದ್ದು ರೂ. 22,625/– ನಿವೃತ್ತಿ ವೇತನವನ್ನು ಮತ್ತು ರೂ. 2,90,000/– ನಿವೃತ್ತಿ ಉಪದಾನವನ್ನು ಪಡೆದಿರುತ್ತಾರೆ.

ರಾಜ್ಯಪಾಲರ ಕಾನೂನು ಸಲಹೆಗಾರರ ಹುದ್ದೆಯನ್ನು ಸೃಜಿಸುವ ಮತ್ತು ನಿವೃತ್ತರಾದ ಸರ್ಕಾರಿ ನೌಕರರನ್ನು, ಸರ್ಕಾರಿ ಸೇವೆಯಲ್ಲಿ ಮರು ನೇಮಕಾತಿ ಮಾಡಬಾರದೆಂಬ ನೀತಿಯನ್ನು ಸಡಿಲಿಸಿ, ಮರು ನೇಮಕಾತಿ ಮಾಡುವ ಪ್ರಸ್ತಾವನೆಯನ್ನು ಪರಿಶೀಲಿಸಿದ್ದು, ಈ ಕೆಳಗೆ ಸೂಚಿಸಿದಂತೆ ಆದೇಶಿಸಲಾಗಿದೆ.

**ಆದೇಶ ಸಂಖ್ಯೆ: ಸಿಆಸುಇ 25 ಪಿಆರ್‌ಬಿ 2011, ಬೆಂಗಳೂರು, ದಿನಾಂಕ: 06/09/2011**

ಕರ್ನಾಟಕ ರಾಜ್ಯಪಾಲರ ಸಚಿವಾಲಯ ಸೇವೆಯಲ್ಲಿ ತಾತ್ಕಾಲಿಕವಾಗಿ ಎರಡು ವರ್ಷಗಳ ಅವಧಿಗೆ ವೇತನ ಶ್ರೇಣಿ ರಹಿತ ರಾಜ್ಯಪಾಲರ ಕಾನೂನು ಸಲಹೆಗಾರರ ಹುದ್ದೆಯನ್ನು ಸೃಜಿಸಲಾಗಿದೆ.

ಸದರಿ ಹುದ್ದೆಯಲ್ಲಿ ಶ್ರೀ ಎಂ.ಆರ್. ಹೆಗಡೆ, ನಿವೃತ್ತ ರಾಜ್ಯ ಚುನಾವಣಾ ಆಯುಕ್ತರು, ಇವರನ್ನು ಎರಡು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ, ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ, ಈ ಕೆಳಗೆ ಸೂಚಿಸಿದ ಷರತ್ತಿಗೊಳ್ಳಪಟ್ಟು ಮರು ನೇಮಕಾತಿ ಮಾಡಲಾಗಿದೆ.

1. ಇವರು ಮರು ನೇಮಕಾತಿ ಅವಧಿಯಲ್ಲಿ ಮಾಸಿಕ ರೂ. 50,735/– ಮೂಲ ವೇತನವನ್ನು ಪಡೆಯಲು ಅರ್ಹರಿರುತ್ತಾರೆ.
2. ಇವರು ನಿವೃತ್ತಿ ವೇತನದ ಮೇಲೆ ದಿನ ಭತ್ಯೆ ಪಡೆಯಲು ಅರ್ಹರಿರುವುದಿಲ್ಲ ಮತ್ತು ನಿವೃತ್ತ ನ್ಯಾಯಾಧೀಶರನ್ನು ನೇಮಕಾತಿ ಮಾಡಿದ ಸಮಯದಲ್ಲಿ ನೀಡುವ ಇತರ ಭತ್ಯೆಗಳಾದ Sumptuary allowance, T.A., D.A. Medical Allowance, LTC ಮುಂತಾದ ಸೌಲಭ್ಯಗಳನ್ನು ಉಚ್ಚ ನ್ಯಾಯಾಲಯದ ನ್ಯಾಯಾಧೀಶರಿಗೆ ಲಭ್ಯವಾಗುವ ದರದಲ್ಲಿ ಪಡೆಯಲು ಅರ್ಹರಿರುತ್ತಾರೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 753 ವೆ–12/11 ದಿನಾಂಕ: 26/08/2011ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ವಿ. ಶಿವಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸುಇ (ರಾಜಕೀಯ)

ಪಿ.ಆರ್. 2192

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಎಂ.ಎಸ್. ಜಯರಾಂ, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಅವರ ವಿರುದ್ಧ ಇಲಾಖಾ ವಿಚಾರಣೆ – ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯನ್ನು ನೇಮಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. ನೋಟೀಸ್ ಸಂಖ್ಯೆ: ಆಇ 114 ರಾಲೆಪ 2008, ದಿನಾಂಕ: 03/12/2009.
2. ಶ್ರೀ ಎಂ,ಎಸ್. ಜಯರಾಂ, ಜಂಟಿ ನಿಯಂತ್ರಕರು, ರಾಲೆಪ ಇಲಾಖೆ ಅವರ ಉತ್ತರ ದಿನಾಂಕ: 08/01/2010.

**ಪ್ರಸ್ತಾವನೆ :**

ಬೆಳಗಾವಿ ಜಿಲ್ಲಾ ಪಂಚಾಯತ್‌ನಲ್ಲಿ ಮುಖ್ಯ ಲೆಕ್ಕಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ವಿವಿಧ ಯೋಜನೆಗಳಡಿ ಅಭಿವೃದ್ಧಿ ಕಾರ್ಯಗಳಲ್ಲಿ ಅನುದಾನವನ್ನು ಬಿಡುಗಡೆ ಮಾಡಲು ಅನಗತ್ಯ ವಿಳಂಬ ಮಾಡುವ ಮೂಲಕ ಅಭಿವೃದ್ಧಿ ಕಾರ್ಯಗಳು ಕುಂಟಿತಗೊಳ್ಳಲು ಕಾರಣರಾದ: ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೆ ಹಾಗೂ ಕರ್ನಾಟಕ (ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ) ಕಾಯ್ದೆ 1999ರ ವಿಧಿ ವಿಧಾನಗಳನ್ನು ಪಾಲಿಸದೆ ರೂ. 13,60,104.49ಗಳ ವೆಚ್ಚದಲ್ಲಿ ಜಿಲ್ಲಾ ಪಂಚಾಯತ್‌ನ ಹೊಸ ಕಟ್ಟಡದ ಶಾಖೆಗಳಿಗೆ ಕಿಟಕಿ ಹಾಗೂ ಬಾಗಿಲುಗಳ ಪರದೆಗಳನ್ನು ಅವರ ಆಯ್ಕೆಯ ಏಜನ್ಸಿಗಳ ಮೂಲಕ ಖರೀದಿಸಿದ್ದಾರೆ; ಅನುದಾನ ಲಭ್ಯವಿಲ್ಲದಿದ್ದರೂ ಸಹ ವಿವಿಧ ಹಣ ಸೆಳೆಯುವ ಅಧಿಕಾರವನ್ನು ಹೆಚ್ಚುವರಿಯಾಗಿ ಹಣ ಸೆಳೆದ ಪ್ರಕರಣಗಳನ್ನು ಹಣ ಹೊಂದಾಣಿಕೆ ಮಾಡದೆ ಹೆಚ್ಚುವರಿ ಹಣ ಡ್ರಾ ಮಾಡಲು ಅವಕಾಶ ಕಲ್ಪಿಸಿದ; ಸಕಾಲದಲ್ಲಿ ಅಭಿವೃದ್ಧಿ ಕಾಮಗಾರಿಗಳ ಅನುಷ್ಠಾನಾಧಿಕಾರಿಗಳಿಗೆ ಅನುದಾನವನ್ನು ನಿಗಧಿಪಡಿಸಿ ಹೊಂದಾಣಿಕೆ ಮಾಡದೇ ದಿ: 04/03/2008ಕ್ಕೆ ರೂ. 56,48,11,050/–ಗಳನ್ನು ಬಾಕಿ ಇಟ್ಟು ಕರ್ತವ್ಯ ನಿರ್ಲಕ್ಷ್ಯ ತೋರಿದ; ಸರ್ಕಾರದಿಂಧ ಜಿಲ್ಲಾ ಪಂಚಾಯತ್‌ಗೆ ವಿವಿಧ ಲೆಕ್ಕಶೀರ್ಷಿಕೆಗಳಲ್ಲಿ ಬಿಡುಗಡೆಯಾದ ರೂ. 5,93,56,000/–ಗಳನ್ನು ಜಿಲ್ಲಾ ಪಂಚಾಯತ್ ಲೆಕ್ಕ ಶೀರ್ಷಿಕೆಗೆ ಜಮಾ ಮಾಡದೇ ಅಭಿವೃದ್ಧಿ ಕಾರ್ಯಗಳು ಸ್ಥಗಿತಗೊಳ್ಳಲು ಕಾರಣರಾದ ಆರೋಪಕ್ಕಾಗಿ ಶ್ರೀ ಎಂ.ಎಸ್. ಜಯರಾಂ, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಅವರಿಗೆ ಸಿ.ಸಿ.ಎ. ನಿಯಮಗಳನ್ವಯ ಮೇಲೆ (1)ರಲ್ಲಿ ಓದಲಾದ ದಿ: 03/12/2009ರ ನೋಟೀಸ್ ನೀಡಿ ಸಮಜಾಯಿಷಿ ಕೇಳಲಾಯಿತು. ಆರೋಪಿ ಅಧಿಕಾರಿ ಮೇಲೆ (2)ರಲ್ಲಿ ಓದಲಾದ ದಿ: 08/01/2010ರ ಉತ್ತರ ನೀಡಿ ಆರೋಪಗಳನ್ನು ನಿರಾಕರಿಸಿದ್ದಾರೆ. ಆದ್ದರಿಂದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ವಿಚಾರಣೆ ನಡೆಸಲು ತೀರ್ಮಾನಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 114 ರಾಲೆಪ 2008 ಬೆಂಗಳೂರು, ದಿನಾಂಕ: 03/09/2011**

ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಂ.ಎಸ್. ಜಯರಾಂ, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಅವರ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ವಿಚಾರಣೆ ನಡೆಸುವ ಸಲುವಾಗಿ ನ್ಯಾಯಮೂರ್ತಿ ಫ.ನಿ.ಗುಡ್ಡಾಕಾರ, ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆ ನಡೆಸುವ ಸಲುವಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 22 ಸೇಇವಿ 2007 ದಿ: 11/04/2008ರಲ್ಲಿ ನಿಗಡಿಪಡಿಸಿರುವಂತೆ ರೂ. 8000/–ಗಳ ಗೌರವ ಧನ ಹಾಗೂ ರೂ. 1500/– ವಾಹನ ಭತ್ಯೆಯನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)(ಸಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಮುಖ್ಯ ಲೆಕ್ಕಾಧಿಕಾರಿ, ಜಿಲ್ಲಾ ಪಂಚಾಯತ್, ಬೆಳಗಾವಿ ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಅವರು ವಿಚಾರಣಾಧಿಕಾರಿಗಳನ್ನು ಕೂಡಲೇ ಸಂಪರ್ಕಿಸಿ ಈ ವಿಚಾರಣೆಗೆ ಪ್ರಕರಣವನ್ನು ಮಂಡಿಸಲು ಕ್ರಮ ಕೈಗೊಳ್ಳತಕ್ಕದ್ದು.

ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಲೇಖನ ಸಾಮಗ್ರಿ ಹಾಗೂ ಶೀಘ್ರಲಿಪಿಗಾರರ ಸೇವೆಯನ್ನು ಒದಗಿಸಲು ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ಬೆಳಗಾವಿ ಅವರು ಕ್ರಮ ಕೈಗೊಳ್ಳತಕ್ಕದ್ದು. ಈ ವಿಚಾರಣೆಯನ್ನು 03 ತಿಂಗಳ ಒಳಗಾಗಿ ಮುಕ್ತಾಯಗೊಳಿಸಿ ವಿಚಾರಣಾ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 2193 ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ)

## ಆರ್ಥಿಕ ಸಚಿವಾಲಯ

**ವಿಷಯ :** ಖಜಾನೆ–II, ಅನುಕಲನ ಹಣಕಾಸು ನಿರ್ವಹಣೆ ವ್ಯವಸ್ಥೆಯ ಅನುಷ್ಠಾನಕ್ಕೆ ಸರ್ಕಾರದ ಮಂಜೂರಾತಿ ನೀಡುವ ಬಗ್ಗೆ. (Integrated Financial Management System).

**ಪ್ರಸ್ತಾವನೆ :**

ಸರ್ಕಾರದ ಸಮಗ್ರ ಹಣಕಾಸು ನಿರ್ವಹಣೆ ವ್ಯವಸ್ಥೆಯನ್ನು ಸ್ಥಾಪಿಸುವ; ಮಹಾಲೇಖಪಾಲರು ಮತ್ತು ಬ್ಯಾಂಕುಗಳಂತಹ ಬಾಹ್ಯ ಏಜೆನ್ಸಿಗಳೊಡನೆ ಸಮನ್ವಯ ಸಾಧಿಸುವ; ನಾಗರೀಕರಿಗೆ ವಿದ್ಯುನ್ಮಾನ ಅಂತರ ಸಂಪರ್ಕ ಸಾಧ್ಯವನ್ನು ಒದಗಿಸುವ ಮೂಲಕ ಮಹತ್ವ ಪೂರ್ಣವಾದ ಸಮರ್ಥ ಅರ್ಥಿಕ ಸುಧಾರಣೆಗಳನ್ನು ತರುವ; ಸರ್ಕಾರದ ಆದಾಯ ಮತ್ತು ಖರ್ಚುವೆಚ್ಚಗಳ ಬಗ್ಗೆ ಮಹತ್ವಪೂರ್ಣವಾದ ಆರ್ಥಿಕ ಸಮಕ್ಷತೆ ಹಾಗೂ ಪರಿಣಾಮಕಾರಿ ಬೆಳವಣಿಗೆಗಳನ್ನು ಉಂಟುಮಾಡುವ ದೃಷ್ಟಿಯಿಂದ ಒಂದು ಸಮಗ್ರ ವ್ಯವಸ್ಥೆ ಹೊಂದುವ ಅಗತ್ಯತೆಯನ್ನು ಸರ್ಕಾರವು ಮನಗಂಡಿದೆ. ಸಾರ್ವಜನಿಕ ಹಣಕಾಸಿನ ದಕ್ಷ, ಪರಿಣಾಮಕಾರಿ ಮತ್ತು ಪಾರದರ್ಶಕ ನಿರ್ವಹಣೆ ಮೂಲಕ ಹಾಗೂ ಹಿತಾಸಕ್ತಿದಾರರ ಹೊಣೆಗಾರಿಕೆಗಳನ್ನು ಹೆಚ್ಚಿಸುವ ಮೂಲಕ ರಾಜ್ಯದ ಅಭಿವೃದ್ಧಿಯನ್ನು ಸುಗಮಗೊಳಿಸಲು ಒಂದು ಸಮಗ್ರ ಹಣಕಾಸು ನಿರ್ವಹಣೆಯ ವ್ಯವಸ್ಥೆಯಾದ ಖಜಾನೆ– II ಹೊಂದುವ ಅವಶ್ಯಕತೆಯನ್ನು ಮನಗಂಡ ಸರ್ಕಾರವು ಸದರೀ ವ್ಯವಸ್ಥೆಯನ್ನು ಆರಂಭಿಸುವ ಸಲುವಾಗಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 138 ಆಖಇ 2011 ಬೆಂಗಳೂರು, ದಿನಾಂಕ: 24/08/2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸನ್ನಿವೇಶಗಳ ಹಿನ್ನೆಲೆಯಲ್ಲಿ ಖಜಾನೆ–2 ಸಮಗ್ರ ಆರ್ಥಿಕ ನಿರ್ವಹಣೆಯ ವ್ಯವಸ್ಥೆ ಯೋಜನೆಯನ್ನು ರೂ. 90.71 ಕೋಟಿಗಳ ವೆಚ್ಚದಲ್ಲಿ ಕೈಗೊಳ್ಳಲು ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಎಲ್ಲಾ ಇಲಾಖೆಗಳು ಆರ್ಥಿಕ ಸೂಚನೆಗಳನ್ನು ಹೊಂದಿರುವ ತಮ್ಮ ಆದೇಶಗಳು, ಪತ್ರ ವ್ಯವಹಾರಗಳು, ಸುತ್ತೋಲೆಗಳು, ಇತ್ಯಾದಿಗಳನ್ನು ಕಡ್ಡಾಯವಾಗಿ ಖಜಾನೆ– II ಮೂಲಕವೇ ಹೊರಡಿಸತಕ್ಕದ್ದು.

ಖಜಾನೆ– II ಯೋಜನೆಯ ಅನುಷ್ಠಾನದಲ್ಲಿ ಪಾಲ್ಗೊಳ್ಳುವ ಮುಖ್ಯ ನಿಯಂತ್ರಣಾಧಿಕಾರಿಗಳು, ನಿಯಂತ್ರಣಾಧಿಕಾರಿಗಳು, ಹಾಗೂ ಸಂಬಂಧಪಟ್ಟ ಇಲಾಖೆಗಳ ಹಣ ಸೆಳೆಯುವ ಹಾಗೂ ಬಟವಾಡೆ ಅಧಿಕಾರಿಗಳಿಗೆ ಅಗತ್ಯವಾದ ಕಂಪ್ಯೂಟರ್, ಪ್ರಿಂಟರ್, ಇಂಟರನೇಟ್ ಅಥವಾ ಕೆ.ಎಸ್.ಡಬ್ಲ್ಯೂ.ಎ.ಎನ್ ಸಂಪರ್ಕ ಸಾಧನಗಳನ್ನು ಒದಗಿಸಲು ಹಾಗೂ ಈ ಉದ್ದೇಶಕ್ಕಾಗಿ ಕೈಗೊಂಡ ತಾಂತ್ರಿಕ ಮೌಲ್ಯಮಾಪನ, ಅದರ ಕಾರ್ಯವಿಧಾನ ಹಾಗೂ ಅದಕ್ಕೆ ತೆಗೆದುಕೊಂಡ ಸಮಯಗಳಿಗೆ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 2194 ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ)

## ಕಂದಾಯ ಸಚಿವಾಲಯ

**ವಿಷಯ :** ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಕಛೇರಿಯನ್ನು ಶಿಂಷಾ ಭವನ ಕಟ್ಟಡದಿಂದ ಸ್ಥಳಾಂತರಿಸುವ ಹಾಗೂ ಒಳವಿನ್ಯಾಸಕ್ಕೆ ಮಂಜೂರಾತಿ ನೀಡುವ ಕುರಿತು.

**ಓದಲಾಗಿದೆ :**
1. ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಅ.ಸ. ಪತ್ರ ಸಂಖ್ಯೆ: ಬಿಎಲ್‌ಡಿ 01/1994–95 ದಿನಾಂಕ: 24/03/2011.
2. ಸರ್ಕಾರದ ಆದೇಶ ಸಂಖ್ಯೆ: ಕಂಇ 28 ಮುನೋಮು 2011 ದಿನಾಂಕ: 31/03/2011.
3. ಸರ್ಕಾರದ ಆದೇಶ ಸಂಖ್ಯೆ: ಕಂಇ 72 ಡಬ್ಲ್ಯೂಬಿಆರ್ 2005(ಭಾ) ದಿನಾಂಕ: 28/05/2011.
4. ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: ಬಿಎಲ್‌ಡಿ 01/94–95 ದಿನಾಂಕ: 17/06/2011.

**ಪ್ರಸ್ತಾವನೆ :**

ಮೇಲೆ ಓದಲಾದ (1) ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರ ಪ್ರಸ್ತಾವನೆ ಅನುಸಾರ ಶಿಂಷಾ ಭವನದಲ್ಲಿರುವ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಕಛೇರಿಯನ್ನು ವ್ಯವಸ್ಥಾಪಕ ನಿರ್ದೇಶಕರು, ಬಿಎಂಟಿಸಿ ರವರ ಸ್ವಾಮ್ಯಕ್ಕೆ ಒಳಪಟ್ಟಿರುವ ಸಾರಿಗೆ ಸಂಕೀರ್ಣ, ಶಾಂತಿನಗರ ಇಲ್ಲಿಗೆ ಸ್ಥಳಾಂತರಿಸಿ, ಸದರಿ ಕಟ್ಟಡದ ಕಛೇರಿಯ ಒಳ ವಿನ್ಯಾಸಕ್ಕೆ ರೂ.1.85ಕೋಟಿಗಳನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 443 ಬಿಆರ್‌ಎಸ್ 2010 ದಿನಾಂಕ: 30/03/2011ರಲ್ಲಿ ಪುನರ್ ವಿನಿಯೋಗ ಮಾಡಿ ಲೆಕ್ಕ ಶೀರ್ಷಿಕೆ 2030–03–001–1–00–051 ಯೋಜನೇತರ ಅಡಿಯಲ್ಲಿ ಮಂಜೂರಾತಿ ನೀಡಿರುವ ಹಿನ್ನೆಲೆಯಲ್ಲಿ ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶ ಹೊರಡಿಸಲಾಗಿದೆ.

ತದನಂತರ ದಿನಾಂಕ: 17/06/2011ರ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರು ಮೇಲೆ ಓದಲಾದ(3)ರ ಸರ್ಕಾರದ ಆದೇಶದಲ್ಲಿ ನೋಂದಣಿ ಮತ್ತು ಮುದ್ರಾಂಕ ಇಲಾಖೆಗೆ ಕಂದಾಯ ಭವನದಲ್ಲಿ ಸ್ಥಳ ಹಂಚಿಕೆ ಮಾಡಿದ್ದು, ಈಗಾಗಲೇ ಬಿಎಂಟಿಸಿ ಸಾರಿಗೆ ಸಂಕೀರ್ಣ, ಶಾಂತಿನಗರ ಕಟ್ಟಡಕ್ಕೆ ಒಳವಿನ್ಯಾಸ ಮತ್ತು ಲ್ಯಾನ್ ವ್ಯವಸ್ಥೆಗಾಗಿ ಆರ್ಥಿಕ ಇಲಾಖೆಯ ಅನುಮತಿಯೊಂದಿಗೆ ರೂ.1.85 ಕೋಟಿಗಳ ಅನುದಾನವನ್ನು ಬಿಡುಗಡೆ ಮಾಡಿ ದಿನಾಂಕ: 31/03/2011 ರಂದು ಖಜಾನೆಯಿಂದ ಚೆಕ್ ಪಡೆಯಲಾಗಿದೆ. ಈ ಮೊತ್ತವನ್ನು ಕಂದಾಯ ಭವನದಲ್ಲಿ ನೋಂದಣಿ ಮತ್ತು ಮುದ್ರಾಂಕ ಇಲಾಖೆಗೆ ಹಂಚಿಕೆಯಾಗಿರುವ ಕೇಂದ್ರ ಕಛೇರಿ ಕಟ್ಟಡದ ಒಳವಿನ್ಯಾಸ ಮತ್ತು ಲ್ಯಾನ್ ವ್ಯವಸ್ಥೆಯನ್ನು ಮಾಡಿಕೊಳ್ಳಲು ಈ ಹಿಂದೆ ನೀಡಿರುವ ಚೆಕ್‌ನ್ನು ಬಿಎಂಟಿಸಿ ಇವರ ಹೆಸರಿನ ಬದಲಾಗಿ ಆಯುಕ್ತರು ಕರ್ನಾಟಕ ಗೃಹ ಮಂಡಳಿ, ಬೆಂಗಳೂರುರವರ ಹೆಸರಿಗೆ ಪಾವತಿಸಲು ಅನುಮತಿ ನೀಡುವಂತೆ ಮೇಲೆ ಓದಲಾದ(4)ರ ಪತ್ರ ಮುಖೇನ ಕೋರಿರುತ್ತಾರೆ.

ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಯ ಅಭಿಪ್ರಾಯದೊಂದಿಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 71 ಮುನೋಮು 2011, ಬೆಂಗಳೂರು, ದಿನಾಂಕ: 29/08/2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪರಿಶೀಲಿಸಿದೆ. ಪ್ರಸ್ತುತ ಸರ್ಕಾರದ ಆದೇಶ ಸಂಖ್ಯೆ: ಕಂಇ 71 ಮುನೋಮು 2011 ದಿನಾಂಕ: 31/03/2011 ಹೊರಡಿಸಿರುವ ಆದೇಶವನ್ನು ರದ್ದುಪಡಿಸಿದೆ. ಈ ಸಂಬಂಧ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರು ನೋಂದಣಿ ಮತ್ತು ಮುದ್ರಾಂಕ ಇಲಾಖೆಗೆ ಕಂದಾಯ ಭವನದಲ್ಲಿ ನೀಡಿರುವ ಜಾಗದಲ್ಲಿ ಕೇಂದ್ರ ಕಛೇರಿ ಕಟ್ಟಡದ ಒಳವಿನ್ಯಾಸ ಮತ್ತು ಗಣಕೀಕರಣಕ್ಕೆ ಬೇಕಾದ ಲ್ಯಾನ್ ವ್ಯವಸ್ಥೆಯನ್ನು ಅಳವಡಿಸಿಕೊಳ್ಳಲು ಅವಶ್ಯಕವಾಗಿರುವ ಅನುದಾನದ ಲಭ್ಯತೆ ಮತ್ತು ಈ ಸಂಬಂಧ ಕರ್ನಾಟಕ ಪಾರದರ್ಶಕತೆ ಅಧಿನಿಯಮದ ಅನುಸಾರ ಪರಿಶೀಲಿಸಿ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 625 ಇಎಕ್ಸ್‌ಪಿ –7/2010 ದಿನಾಂಕ: 23/07/2011ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಕೆ. ರಾಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 2195 ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಎಲ್.ಟಿ. ಜಗದೀಶ್ವರ್, ನಿವೃತ್ತ ತಹಶೀಲ್ದಾರ್ ಇವರಿಗೆ ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1. ಶ್ರೀ ಎಲ್.ಟಿ. ಜಗದೀಶ್ವರ್, ನಿವೃತ್ತ ತಹಶೀಲ್ದಾರ್ ಇವರ ದಿ: 01.02.2010 ರ ಪತ್ರ.
2. ಮಹಾಲೇಖಪಾಲರ ಪತ್ರ ಸಂಖ್ಯೆ: GE1/R3/Vol 315/240, ದಿನಾಂಕ: 05–05–2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂ. (1) ದಿನಾಂಕ: 01–02–2010 ರ ಪತ್ರದಲ್ಲಿ ಶ್ರೀ ಎಲ್.ಟಿ. ಜಗದೀಶ್ವರ್, ನಿವೃತ್ತ ತಹಶೀಲ್ದಾರ್ ಇವರು ತಮಗೆ ದಿನಾಂಕ: 01–08–2004 ರಿಂದ ಜಾರಿಗೆ ಬರುವಂತೆ ಒಟ್ಟು 3 ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ. ಈ ಬಗ್ಗೆ ಮಹಾಲೇಖಪಾಲರು ಮೇಲೆ ಓದಲಾದ ಕ್ರ.ಸಂ. (2) ರ ದಿನಾಂಕ: 05–05–2010 ರ ಪತ್ರದಲ್ಲಿ ಶ್ರೀ ಎಲ್.ಟಿ. ಜಗದೀಶ್ವರ್, ರವರು ವೇತನ ಶ್ರೇಣಿ ರೂ. 6,000–11,200ರಲ್ಲಿ ದಿನಾಂಕ: 01–08–2003 ರಂದು ಗರಿಷ್ಠ ವೇತನ ಮಿತಿ ತಲುಪಿರುತ್ತಾರೆಂದು, ಸದರಿಯವರು ದಿನಾಂಕ: 01–08–2004 ರಿಂದ ಮೊದಲನೇ ಸ್ಥಗಿತ ವೇತನ ಬಡ್ತಿಗೆ, ದಿನಾಂಕ: 01–08–2005 ರಿಂದ ಎರಡನೇ ಸ್ಥಗಿತ ವೇತನ ಬಡ್ತಿಗೆ, ದಿನಾಂಕ: 01–08–2006 ರಿಂದ ಮೂರನೇ ಸ್ಥಗಿತ ಬಡ್ತಿಗೆ ಅರ್ಹರಿರುವುದಾಗಿ ವರದಿ ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 37 ಎಎಸ್‌ಡಿ 2011, ಬೆಂಗಳೂರು, ದಿನಾಂಕ : 03–08–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀ ಎಲ್.ಟಿ. ಜಗದೀಶ್ವರ್, ನಿವೃತ್ತ ತಹಶೀಲ್ದಾರ್ ಇವರಿಗೆ ಈ ಕೆಳಕಂಡಂತೆ ಒಟ್ಟು 3 ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡಿ ಆದೇಶಿಸಿದೆ.

1) ದಿನಾಂಕ: 01–08–2004 ರಿಂದ ಮೊದಲನೇ – ಸ್ಥಗಿತ ವೇತನ ಬಡ್ತಿ –
(ವೇತನ ಶ್ರೇಣಿ – ರೂ. 6000–11,200).

2) ದಿನಾಂಕ: 01–08–2005 ರಿಂದ ಎರಡನೇ – ಸ್ಥಗಿತ ವೇತನ ಬಡ್ತಿ –
(ವೇತನ ಶ್ರೇಣಿ – ರೂ. 11,400–21,600).

3) ದಿನಾಂಕ: 01–08–2006 ರಿಂದ ಮೂರನೇ – ಸ್ಥಗಿತ ವೇತನ ಬಡ್ತಿ –
(ವೇತನ ಶ್ರೇಣಿ – ರೂ. 11,400–21,600).

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2196

**ಎನ್. ಗೋಪಾಲಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಕೆ. ಕೇಶವರಾಜು, ಹಿಂದಿನ ತಹಶೀಲ್ದಾರ್, ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸಲು ಲೋಕಾಯುಕ್ತರಿಗೆ ವಹಿಸಿಕೊಡುವ ಬಗ್ಗೆ.

**ಓದಲಾಗಿದೆ :**
1) ಶಿವಮೊಗ್ಗ ಜಿಲ್ಲಾಧಿಕಾರಿಗಳ ಅ.ಸ.ಪತ್ರ ಸಂ: ಇಎಸ್‌ಟಿ(1):ಸಿಆರ್–42/2009–10, ದಿನಾಂಕ:07–05–2009.
2) ಸರ್ಕಾರದ ಆದೇಶ ಸಂ: ಆರ್‌ಡಿ 05 ಎಡಿಇ 2009, ದಿನಾಂಕ: 27–05–2009.
3) ಸರ್ಕಾರದ ಆದೇಶ ಸಂ: ಆರ್‌ಡಿ 08 ಎಡಿಇ 2009, ದಿನಾಂಕ: 16–02–2010.
4) ಅಸಿಸ್ಟೆಂಟ್ ರಿಜಿಸ್ಟ್ರಾರ್ ಲೀಗಲ್ ಒಪಿನಿಯನ್, ಇವರ ಅ.ಸ.ಪತ್ರ ಸಂಖ್ಯೆ: Compt/Uplok/BD/235/2010/ARLO-1, ದಿನಾಂಕ: 29.06.2011

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1)ರ ದಿನಾಂಕ: 07–05–2009ರ ಅ.ಸ.ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ ಇವರು ತೀರ್ಥಹಳ್ಳಿ ತಾಲ್ಲೂಕಿನಲ್ಲಿ ಅನಧಿಕೃತ ಮರಳು ಸಾಗಾಣಿಕೆಗೆ ಸಂಬಂಧಿಸಿದಂತೆ, ತನಿಖಾಧಿಕಾರಿಗಳು ಹಾಗೂ ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ಶಿವಮೊಗ್ಗ ಇವರ ದಿನಾಂಕ: 07–05–2009ರ ಪ್ರಥಮ ಮಾಹಿತಿ ವರದಿಯಲ್ಲಿ ಶ್ರೀ ಕೆ. ಕೇಶವರಾಜು, ತಾಲ್ಲೂಕು ತಹಶೀಲ್ದಾರ್, ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ ಇವರನ್ನು ದಿನಾಂಕ: 07–05–2009ರಂದು ಲೋಕಾಯುಕ್ತ ಪ್ರಕರಣದಲ್ಲಿ ದಸ್ತಗಿರಿ ಮಾಡಿ ಲಂಚ ನಿರೋಧಕ ಕಾಯ್ದೆ 1988ರ ಕಲಂ 7(13)(1)(ಡಿ) ರಡಿ 13(2) ರ ಜೊತೆಯಲ್ಲಿ ಕ್ರೈಂ ಸಂ: 5/2009ರ ಪ್ರಕರಣವನ್ನು ದಾಖಲಿಸಿರುವುದಾಗಿ ವರದಿ ಮಾಡುತ್ತಾ ಸದರಿಯವರನ್ನು ಶಿವಮೊಗ್ಗ ಜಿಲ್ಲಾ ಘನ ವಿಶೇಷ ಹಾಗೂ ಪ್ರಧಾನ ಸತ್ರ ನ್ಯಾಯಾಲಯದಲ್ಲಿ ಹಾಜರುಪಡಿಸಲಾಗುವುದೆಂದು ತಿಳಿಸಿರುತ್ತಾರೆ. ಆದ್ದರಿಂದ ಕರ್ನಾಟಕ ಲೋಕಾಯುಕ್ತ, ಶಿವಮೊಗ್ಗ ಪೊಲೀಸ್ ಠಾಣೆಯ ತನಿಖಾಧಿಕಾರಿ ಮತ್ತು ಪೊಲೀಸ್ ಇನ್ಸ್‌ಪೆಕ್ಟರ್ ಇವರು ದಿನಾಂಕ: 07–05–2009ರಂದು ವರದಿ ಮಾಡಿರುವಂತೆ, ಶ್ರೀ ಕೆ. ಕೇಶವರಾಜು, ತಹಶೀಲ್ದಾರ್, ತೀರ್ಥಹಳ್ಳಿ ಇವರು ಈ ಪ್ರಕರಣದಲ್ಲಿ ಕ್ರಿಮಿನಲ್ ಮೊಕದ್ದಮೆಗೆ ಗುರಿಯಾಗಿರುವ ಕಾರಣ, ಅವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(1)(ಎ) ರನ್ವಯ ಸೇವೆಯಿಂದ ಅಮಾನತ್ತುಗೊಳಿಸುವಂತೆ ಕೋರಿ, ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದರು.

ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(1)(ಎ)ರನ್ವಯ ಸೇವೆಯಿಂದ ಅಮಾನತ್ತುಗೊಳಿಸಿ ಮೇಲೆ ಓದಲಾದ ಕ್ರ.ಸಂ.(2)ರ ಸರ್ಕಾರವು ಆದೇಶ ಹೊರಡಿಸಿರುತ್ತದೆ ಸದರಿ ಅಧಿಕಾರಿಯ ವಿರುದ್ಧ ಗುನ್ನೆ ಸಂಖ್ಯೆ: 05/2009ರಲ್ಲಿ ಆರಕ್ಷಕ ನಿರೀಕ್ಷಕರು, ಶಿವಮೊಗ್ಗ, ಕರ್ನಾಟಕ ಲೋಕಾಯುಕ್ತ, ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿಯ ನಕಲು ಮತ್ತು ತನಿಖಾ ದಾಖಲಾತಿಗಳನ್ನು (ಉಲ್ಲೇಖ–2,3) ಮಾನ್ಯ ಅಪರ ಪೊಲೀಸ್ ಮಹಾನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ತಮ್ಮ ಪತ್ರದ ದಿನಾಂಕ: 01–09–2009 (ಉಲ್ಲೇಖ–1)ರೊಡನೆ ಕಳುಹಿಸುತ್ತಾ ಆಪಾದಿತನನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ನಿವಾರಣಾ ಅಧಿನಿಯಮ 1988ರ 19ನೆಯ ಕಲಂ (1)ರಡಿಯಲ್ಲಿ ಮಂಜೂರಾತಿಗಾಗಿ ಕೋರಿರುತ್ತಾರೆ. ಸರ್ಕಾರವು ಲೋಕಾಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ, ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2) ರ ಪ್ರಕಾರ ಹಾಗೂ ಐ.ಪಿ.ಸಿ. ಕಲಂ 409, 468ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಗಗೊಳಿಸಲು ಐಪಿಸಿ ಕಾಯ್ದೆ 19(1)(ಸಿ) ಹಾಗೂ ಕಲಂ 197 ಸಿಆರ್‌ಪಿಸಿ ಅಡಿಯಲ್ಲಿ ಮೇಲೆ ಓದಲಾದ ಕ್ರ.ಸಂ.3 ರ ಆದೇಶದಲ್ಲಿ ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ ಕ್ರ.ಸಂ. 4 ರ ದಿ: 19.06.2011 ರ ಪತ್ರದಲ್ಲಿ ಅಸಿಸ್ಟೆಂಟ್ ರಿಜಿಸ್ಟ್ರಾರ್ ಲೀಗಲ್ ಒಪಿನಿಯನ್–1 ರವರು ಕರ್ನಾಟಕ ಲೋಕಾಯುಕ್ತ ಕಾಯ್ದೆಯ ನಿಯಮ 12(3) ರನ್ವಯ ಮಾನ್ಯ ಉಪ ಲೋಕಾಯುಕ್ತರ ದಿ: 28.06.2011 ರ ಸದರಿ ಪ್ರಕರಣದ ವರದಿಯೊಂದಿಗೆ ಮೂಲ ದಾಖಲೆಗಳನ್ನು ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿರುವುದಾಗಿ ತಿಳಿಸಿರುತ್ತಾರೆ.

ಅಸಿಸ್ಟೆಂಟ್ ರಿಜಿಸ್ಟ್ರಾರ್ ಲೀಗಲ್ ಒಪೀನಿಯನ್–1 ರವರು ತಿಳಿಸಿರುವ ಮಾನ್ಯ ಉಪ ಲೋಕಾಯುಕ್ತರು ದಿ: 28.06.2011ರ ವರದಿಯಲ್ಲಿ ಮಾನ್ಯ ಉಪಲೋಕಾಯುಕ್ತರು ಶ್ರೀ ಕೆ. ಕೇಶವರಾಜು, ಹಿಂದಿನ ತಹಶೀಲ್ದಾರ್, ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ ಇವರು, ದಾಖಲೆಗಳ ಹಾಗೂ ವಿಚಾರಣೆಯನ್ವಯ ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು 1966 ರ ನಿಯಮ 3 (1) (i) ಮತ್ತು (iii) ರನ್ವಯ ಕರ್ತವ್ಯ ಲೋಪ

ಎಸಗಿರುತ್ತಾರೆ. ಆದುದರಿಂದ, ಸಕ್ಷಮ ಪ್ರಾಧಿಕಾರವು ಶಿಸ್ತು ಕ್ರಮ ಪ್ರಾರಂಭಿಸುವಂತೆ ಮತ್ತು ಕರ್ನಾಟಕ ಸೇವಾ ನಿಯಮ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 14(ಎ) ರನ್ವಯ ಸದರಿ ಅಧಿಕಾರಿಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ತಮಗೆ ವಹಿಸಿಕೊಡುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಮಾನ್ಯ ಉಪಲೋಕಾಯುಕ್ತರ ದಿ: 28.06.2011 ರ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿ ಮಾನ್ಯ ಉಪ ಲೋಕಾಯುಕ್ತರ ಶಿಫಾರಸ್ಸನ್ನು ಒಪ್ಪಿ ಕರ್ನಾಟಕ ಸೇವಾ ನಿಯಮ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 14 (ಎ) ರನ್ವಯ ಶ್ರೀ ಕೆ. ಕೇಶವರಾಜು, ಹಿಂದಿನ ತಹಶೀಲ್ದಾರ್, ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಲು ಸರ್ಕಾರವು ತೀರ್ಮಾನಿಸಿರುವುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 09 ಎಡಿಇ 2009, ಬೆಂಗಳೂರು, ದಿನಾಂಕ : 03-09-2011**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಕೆ. ಕೇಶವರಾಜು (ಹಿಂದಿನ ತಹಶೀಲ್ದಾರ್, ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ), ಪ್ರಸ್ತುತ ತಹಶೀಲ್ದಾರ್ ಬಿಬಿಎಂಪಿ, ಬೆಂಗಳೂರು ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 14(ಎ) ರನ್ವಯ ಮಾನ್ಯ ಉಪಲೋಕಾಯುಕ್ತರು ಕರ್ನಾಟಕ ರಾಜ್ಯ ಇವರಿಗೆ ವಹಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2197

**ಎನ್. ಗೋಪಾಲಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

## ಕಂದಾಯ ಸಚಿವಾಲಯ

**ವಿಷಯ :** 2011ನೇ ಸಾಲಿನಲ್ಲಿ ಚಿತ್ರದುರ್ಗ ಜಿಲ್ಲೆಗೆ ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಪ್ರಸ್ತಾವನೆ:**

2011ನೇ ಸಾಲಿನಲ್ಲಿ ಚಿತ್ರದುರ್ಗ ಜಿಲ್ಲೆಯಲ್ಲಿ ಮುಂಗಾರು ಮಳೆ ಬಾರದೆಯಿರುವುದರಿಂದ ಜಿಲ್ಲೆಯಲ್ಲಿ ಕುಡಿಯುವ ನೀರು ಮತ್ತು ಮೇವಿನ ಕೊರತೆ ಉಂಟಾಗುವ ಸಾಧ್ಯತೆಯಿರುತ್ತದೆ. ಆದುದರಿಂದ ಕುಡಿಯುವ ನೀರು ಒದಗಿಸುವ ದೃಷ್ಟಿಯಿಂದ ಮತ್ತು ಇತರೆ ಪ್ರಕೃತಿ ವಿಕೋಪ ಪರಿಹಾರ ಕಾರ್ಯ ಕೈಗೊಳ್ಳಲು ಚಿತ್ರದುರ್ಗ ಜಿಲ್ಲಾಧಿಕಾರಿಗಳಿಗೆ ಅನುದಾನ ಬಿಡುಗಡೆ ಮಾಡುವ ಅವಶ್ಯಕತೆಯಿರುತ್ತದೆ ಆದುದರಿಂದ ಚಿತ್ರದುರ್ಗ ಜಿಲ್ಲೆಗೆ ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡಲು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 190 ಟಿಎನ್‌ಆರ್ 2011, ಬೆಂಗಳೂರು, ದಿನಾಂಕ : 05–09–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮುಂಗಾರು ಮಳೆ ಕೊರತೆ ಉಂಟಾಗಿರುವ ಚಿತ್ರದುರ್ಗ ಜಿಲ್ಲೆಯಲ್ಲಿ ಪ್ರಕೃತಿ ವಿಕೋಪ ಪರಿಹಾರ ಕಾರ್ಯಗಳನ್ನು ಕೈಗೊಳ್ಳಲು ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರಿಗೆ ರೂ. 100.00 ಲಕ್ಷ (ರೂಪಾಯಿ ನೂರು ಲಕ್ಷಗಳು ಮಾತ್ರ) ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

1) ಮೇಲಿನಂತೆ ಬಿಡುಗಡೆ ಮಾಡಿದ ಹಣವನ್ನು ಈ ಕೆಳಕಂಡಂತೆ ಆದ್ಯತೆಯ ಮೇರೆಗೆ ಉಪಯೋಗಿಸುವುದು.

ಅ) ಮಾನವ/ಪ್ರಾಣಿ ಜೀವಹಾನಿ.

ಆ) ಮನೆ ಹಾನಿ.

ಇ) ಬೆಳೆ ಹಾನಿ.

ಈ) ಕುಡಿಯುವ ನೀರಿನ ವ್ಯವಸ್ಥೆ.

ಉ) ಜಾನುವಾರುಗಳ ಸಂರಕ್ಷಣೆ.

ಊ) ಹಾನಿಗೊಳಗಾದ ಮೂಲಭೂತ ಸೌಕರ್ಯಗಳಿಗೆ ತುರ್ತು ರಿಪೇರಿ.

2) ಕೇಂದ್ರ ಸರ್ಕಾರವು ಹೊರಡಿಸಿರುವ ಮಾರ್ಗಸೂಚಿಗಳ ಪ್ರಕಾರ ವೆಚ್ಚ ಮಾಡುವುದು.

3) ಅನುದಾನ ಲಭ್ಯತೆ ಇಲ್ಲದೇ ಯಾವುದೇ ದುರಸ್ತಿ ಕಾಮಗಾರಿಗಳನ್ನು ಎಸ್.ಡಿ.ಆರ್.ಎಫ್/ಎನ್‌ಸಿಸಿಎಫ್ ಅಡಿಯಲ್ಲಿ ಕೈಗೊಳ್ಳುವಂತಿಲ್ಲ ಹಾಗೂ ಕಾಮಗಾರಿಗಳನ್ನು ಬಿಡುಗಡೆಯಾದ ಅನುದಾನಕ್ಕೆ ಸೀಮಿತಗೊಳಿಸುವುದು.

4) ಪ್ರಕೃತಿ ವಿಕೋಪದಿಂದ ಆದಂತಹ ವಿಪತ್ತು ಹಾನಿಗೆ ಮಾತ್ರ ಪರಿಹಾರ ನೀಡುವುದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಈ ಮೊತ್ತವನ್ನು ವಿಧಾನಸೌಧದಲ್ಲಿರುವ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಶಾಖೆಯಲ್ಲಿನ ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಎಂ. ಮಲ್ಲಿಕಾರ್ಜುನಸ್ವಾಮಿ**

ಪಿ.ಆರ್. 2198

ಸರ್ಕಾರದ ಉಪ ಕಾರ್ಯದರ್ಶಿ
ಕಂದಾಯ ಇಲಾಖೆ (ವಿ.ನಿ.)

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಟಿ.ಎಲ್. ನಾಯಕ್, ಹಿಂದಿನ ತಹಶೀಲ್ದಾರ್, ಹೊಸಕೋಟೆ ತಾಲ್ಲೂಕು (ಪ್ರಸ್ತುತ ನಿವೃತ್ತರು) ಹಾಗೂ ಇತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಸಂಬಂಧ ಮಂಡನಾಧಿಕಾರಿಯನ್ನು ಬದಲಾವಣೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ:ಕಂಇ27 ಎಡಿಇ 2008, ದಿನಾಂಕ: 09-10-2009.

2. ಜಿಲ್ಲಾಧಿಕಾರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ರವರ ಪತ್ರ ಸಂಖ್ಯೆ:ಎಎಸ್‌ಟಿ(2) ಸಿಸಿಎ/ಸಿಆರ್/26/06-07, ದಿ: 25.06.2011

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ಶಿಸ್ತು ಪ್ರಾಧಿಕಾರದ ಪರವಾಗಿ, ಪ್ರಕರಣವನ್ನು ವಿಚಾರಣಾ ಪ್ರಾಧಿಕಾರದ ಮುಂದೆ ಮಂಡಿಸಲು, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹೊಸಕೋಟೆ ತಹಶೀಲ್ದಾರ್‌ರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ ಓದಲಾದ ಕ್ರ.ಸಂ.(2) ರಲ್ಲಿ ಜಂಟಿ ಇಲಾಖಾ ವಿಚಾರಣೆಯಲ್ಲಿ ತಹಶೀಲ್ದಾರ್, ಹೊಸಕೋಟೆ ತಾಲ್ಲೂಕು ರವರನ್ನು ಮಂಡನಾಧಿಕಾರಿಯಾಗಿ ನೇಮಕ ಮಾಡಲಾಗಿದೆಯಲ್ಲದೇ, ಸಾಕ್ಷಿಯನ್ನಾಗಿಯೂ ಹೆಸರಿಸಲಾಗಿದೆ. ಒಂದೇ ಪ್ರಕರಣದಲ್ಲಿ ಮಂಡನಾಧಿಕಾರಿ ಹಾಗೂ ಸಾಕ್ಷಿದಾರರಾಗಿರುವುದು ಸಮಂಜಸವಲ್ಲವಾದ್ದರಿಂದ ಮಂಡನಾಧಿಕಾರಿಯ ಕಾರ್ಯವನ್ನು ಬೇರೊಬ್ಬರಿಗೆ ವಹಿಸುವಂತೆ ಕೋರಿರುತ್ತಾರೆ.

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹೊಸಕೋಟೆ ತಹಶೀಲ್ದಾರರ ಬದಲಾಗಿ ಮಂಡನಾಧಿಕಾರಿಯನ್ನಾಗಿ ಕಛೇರಿ ಸಹಾಯಕ, ಜಿಲ್ಲಾಧಿಕಾರಿ ಕಛೇರಿ, ಗ್ರಾಮಾಂತರ ಜಿಲ್ಲೆ, ಬೆಂಗಳೂರು ಇವರನ್ನು ನೇಮಿಸಲು ಸರ್ಕಾರವು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 27 ಎಡಿಇ 2008, ಬೆಂಗಳೂರು, ದಿನಾಂಕ : 05-09-2011**

ಪ್ರಸ್ತಾವನೆಯನ್ನು ಪರಿಶೀಲಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹೊಸಕೋಟೆ ತಹಶೀಲ್ದಾರರ ಬದಲಾಗಿ ಕಛೇರಿ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಗೋಪಾಲಯ್ಯ**

ಪಿ.ಆರ್. 2199

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು-3)

## ಕಂದಾಯ ಸಚಿವಾಲಯ

**ವಿಷಯ :** ಉಡುಪಿ ಜಿಲ್ಲೆಯ ಕುಂದಾಪುರ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ :** (1) ಸರ್ಕಾರದ ಆದೇಶ ಸಂಖ್ಯೆ: ಕಂಇ 139 ಮುಸರ 2008 (ಭಾ) ದಿನಾಂಕ: 25-02-2009.

(2) ಸರ್ಕಾರದ ಆದೇಶ ಸಂಖ್ಯೆ: ಕಂಇ 139 ಮುಸರ 2008 ದಿನಾಂಕ: 28.01.2010..

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ಮತ್ತು (2)ರ ಆದೇಶಗಳಲ್ಲಿ ಉಡುಪಿ ಜಿಲ್ಲೆಯ ಕುಂದಾಪುರ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಯನ್ನು ಈ ಕೆಳಕಂಡಂತೆ ರಚಿಸಿ ಆದೇಶಿಸಲಾಗಿತ್ತು.

| | | |
|---|---|---|
| 1) | ಮಾನ್ಯ ವಿಧಾನಸಭಾ ಸದಸ್ಯರು, ಕುಂದಾಪುರ ವಿಧಾನಸಭಾ ಕ್ಷೇತ್ರ | ಅಧ್ಯಕ್ಷರು |
| 2) | ಕಾರ್ಯನಿರ್ವಾಹಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಉಡುಪಿ ಜಿಲ್ಲೆ | ಸದಸ್ಯರು |
| 3) | ಕಾರ್ಯ ನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಕುಂದಾಪುರ ತಾಲ್ಲೂಕು. | ಸದಸ್ಯರು |
| 4) | ಶ್ರೀ ಶ್ರೀನಿವಾಸ ಗಾಣಿಗ ಬಿನ್ ವೆಂಕಟರಮಣ ಗಾಣಿಗ, ಎನ್.ಹೆಚ್. 17, ಬೈಂದೂರು, ಕುಂದಾಪುರ ತಾಲ್ಲೂಕು, ಉಡುಪಿ ಜಿಲ್ಲೆ (ಸಾಮಾನ್ಯ) | ಸದಸ್ಯರು |
| 5) | ಶ್ರೀಮತಿ ಸುಜಾತ ಶೆಟ್ಟಿ ಕೋಂ ನಾರಾಯಣ ಶೆಟ್ಟಿ, ಕಡ್ರೆ ಸಿದ್ದಾಪುರ, ಬೈಂದೂರು, ಕುಂದಾಪುರ ತಾಲ್ಲೂಕು, ಉಡುಪಿ ಜಿಲ್ಲೆ (ಮಹಿಳೆ) | ಸದಸ್ಯರು |
| 6) | ಶ್ರೀ ದಿನೇಶ ಬಿನ್ ಶಂಕರ, ಪೇಟೆ ಶಿರೂರು, ಬೈಂದೂರು ಕುಂದಾಪುರ ತಾಲ್ಲೂಕು, ಉಡುಪಿ ಜಿಲ್ಲೆ. (ಪರಿಶಿಷ್ಟ ಜಾತಿ) | ಸದಸ್ಯರು |
| 7) | ಶ್ರೀ ರಾಮನಾಯ್ಕ ಬಿನ್ ಗೋವಿಂದ ನಾಯ್ಕ, ಕೆರ್ಕಾಡು ಮನೆ, ಕಮಲಶಿಲೆ, ಹಳ್ಳಿ ಹೊಳೆ, ಬೈಂದೂರು, ಕುಂದಾಪುರ ತಾಲ್ಲೂಕು, ಉಡುಪಿ. (ಪರಿಶಿಷ್ಟ ಪಂಗಡ) | ಸದಸ್ಯರು |
| 8) | ತಹಶೀಲ್ದಾರ್, ಕುಂದಾಪುರ ತಾಲ್ಲೂಕು | ಸದಸ್ಯ-ಕಾರ್ಯದರ್ಶಿ |

ಈ ಸಮಿತಿಯನ್ನು ರದ್ದುಪಡಿಸಿ, ನೂತನ ಅಧಿಕಾರೇತರ ಸದಸ್ಯರನ್ನು ಒಳಗೊಂಡಂತೆ ಸಮಿತಿಯನ್ನು ಪುನರ್ ರಚಿಸಲು ಸರ್ಕಾರವು ನಿರ್ಧರಿಸಿದೆ. ಅದರಂತೆ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 01 ಮುಸರ 2011 ಬೆಂಗಳೂರು, ದಿನಾಂಕ : 05–09–2011**

ಈಗಾಗಲೇ ರಚಿಸಲಾಗಿದ್ದ ಉಡುಪಿ ಜಿಲ್ಲೆಯ ಕುಂದಾಪುರ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಯನ್ನು ರದ್ದುಪಡಿಸಿ, ಈ ಕೆಳಕಂಡಂತೆ ಸಮಿತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಪುನರ್ ರಚಿಸಿ ಸರ್ಕಾರವು ಆದೇಶಿಸಿದೆ.

| | | |
|---|---|---|
| 1) | ಮಾನ್ಯ ವಿಧಾನಸಭಾ ಸದಸ್ಯರು, ಕುಂದಾಪುರ ವಿಧಾನಸಭಾ ಕ್ಷೇತ್ರ | ಅಧ್ಯಕ್ಷರು |
| 2) | ಕಾರ್ಯನಿರ್ವಾಹಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಉಡುಪಿ ಜಿಲ್ಲೆ | ಸದಸ್ಯರು |
| 3) | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಕುಂದಾಪುರ ತಾಲ್ಲೂಕು. | ಸದಸ್ಯರು |
| 4) | ಶ್ರೀ ಸಂಜೀವ ಮೊಗವೀರ ಬಿನ್ ಕೃಷ್ಣ ಮೊಗವೀರ ಬೈಲುಮನೆ, ಹೆಚ್.ಎಂ.ಟಿ. ರಸ್ತೆ, ಕೋಣೆ ಗ್ರಾಮ ಮತ್ತು ಅಂಚೆ, ಕುಂದಾಪುರ ತಾಲ್ಲೂಕು (ಸಾಮಾನ್ಯ) | ಸದಸ್ಯರು |
| 5) | ಶ್ರೀಮತಿ ಜಲಜ ಬಾಯಿ ಕೋಂ ದೇವ ನಾಯ್ಕ, ರೂಪ್ಯಾಪಾಲು, ಹೆಂಗವಳ್ಳಿ ಗ್ರಾಮ ಮತ್ತು ಅಂಚೆ, ಕುಂದಾಪುರ ತಾಲ್ಲೂಕು (ಮಹಿಳೆ) | ಸದಸ್ಯರು |
| 6) | ಶ್ರೀ ಬಿ. ವಾಸುದೇವ ಬಿನ್ ಕೊರಗ, ಹಂಗಾರಕಟ್ಟೆ, ಡಾ|| ಅಂಬೇಡ್ಕರ್ ರಸ್ತೆ, ಬಾಳ್ಕುದ್ರು ಗ್ರಾಮ, ಹಂಗಾರಕಟ್ಟೆ ಅಂಚೆ, ಉಡುಪಿ ತಾಲ್ಲೂಕು. (ಪರಿಶಿಷ್ಟ ಜಾತಿ) | ಸದಸ್ಯರು |
| 7) | ಶ್ರೀ ಲಕ್ಷ್ಮಣ ನಾಯ್ಕ ಬಿನ್ ಕುಷ್ಠ ನಾಯ್ಕ ಕೊಡ್ಲಿ ಹೇರಾಡಿ, ಹೇರಾಡಿ ಗ್ರಾಮ, ಬಾರ್ಕೂರು ಅಂಚೆ, ಉಡುಪಿ ತಾಲ್ಲೂಕು (ಪರಿಶಿಷ್ಟ ಪಂಗಡ) | ಸದಸ್ಯರು |
| 8) | ತಹಶೀಲ್ದಾರ್, ಕುಂದಾಪುರ ತಾಲ್ಲೂಕು | ಸದಸ್ಯ–ಕಾರ್ಯದರ್ಶಿ |

ಈ ಸಮಿತಿಯ ಅವಧಿ ಐದು ವರ್ಷಗಳು ಅಥವಾ ಸರ್ಕಾರವು ಮುಂದಿನ ಆದೇಶ ಹೊರಡಿಸುವವರೆಗೆ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ತಿತ್ವದಲ್ಲಿರುತ್ತದೆ.

ಈ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ: 03.02.2001 ರಲ್ಲಿ ಹೊರಡಿಸಿದ ನಿಯಮಗಳನ್ವಯ ಹಾಗೂ ಸದರಿ ನಿಯಮಗಳಲ್ಲಿ ಸೂಚಿಸಿರುವ ಷರತ್ತುಗಳಿಗೆ ಬದ್ಧವಾಗಿ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಉಮಾಪತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಮುಜರಾಯಿ)

ಪಿ.ಆರ್. 2200

## ಕಂದಾಯ ಸಚಿವಾಲಯ

**ವಿಷಯ :** ಭಾರತೀಯ ಪರಂಪರೆ ಉದ್ಯಾನವನವನ್ನು ಸಾರ್ವಜನಿಕ ಖಾಸಗಿ ಸಹಭಾಗಿತ್ವದಲ್ಲಿ ನಿರ್ಮಿಸುವ ಬಗ್ಗೆ ರೂಪುರೇಷೆಗಳನ್ನು ಶಿಫಾರಸ್ಸು ಮಾಡಲು ಸಮಿತಿ ರಚಿಸುವ ಕುರಿತು.

**ಓದಲಾಗಿದೆ :** ಸರ್ಕಾರದ ಆದೇಶ ಸಂ: ಕಂಇ173 ಮುಅಬಿ 2011, ದಿನಾಂಕ: 18–07–2011.

**ಪ್ರಸ್ತಾವನೆ:**

2011–12ನೇ ಸಾಲಿನ ಆಯವ್ಯಯದಲ್ಲಿ ಭಾರತೀಯ ಪರಂಪರೆ ಉದ್ಯಾನವನವನ್ನು ಸಾರ್ವಜನಿಕ ಖಾಸಗಿ ಸಹಭಾಗಿತ್ವದಲ್ಲಿ ರೂ. 100.00 ಕೋಟಿ ವೆಚ್ಚದಲ್ಲಿ ನಿರ್ಮಿಸಲು ಸರ್ಕಾರವು ಘೋಷಣೆ ಮಾಡಿದೆ.

ಅದರಂತೆ, ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಅವಶ್ಯವಾದ ರೂಪುರೇಷೆಗಳನ್ನು ಶಿಫಾರಸ್ಸು ಮಾಡುವ ಸಲುವಾಗಿ ಮಾನ್ಯ ಮುಜರಾಯಿ ಸಚಿವರ ಅಧ್ಯಕ್ಷತೆಯಲ್ಲಿ ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಸಮಿತಿಯನ್ನು ರಚಿಸಲಾಗಿರುತ್ತದೆ.

ಈ ಸಮಿತಿಗೆ ಸರ್ಕಾರದ ಕಾರ್ಯದರ್ಶಿಗಳು, ಮೂಲಭೂತ ಸೌಕರ್ಯ ಇಲಾಖೆ ಇವರನ್ನು ಸದಸ್ಯರನ್ನಾಗಿ ನೇಮಕ ಮಾಡಲು ಸರ್ಕಾರವು ನಿರ್ಧರಿಸಿದೆ.

ಅದರನ್ವಯ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 173 ಮುಅಬಿ 2011, ಬೆಂಗಳೂರು, ದಿನಾಂಕ : 05–09–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಭಾರತೀಯ ಪರಂಪರೆ ಉದ್ಯಾನವನವನ್ನು ಸಾರ್ವಜನಿಕ ಸಹಭಾಗಿತ್ವದಲ್ಲಿ ಯೋಜನೆಯನ್ನು ಅನುಷ್ಠಾನಗೊಳಿಸಲು ಅವಶ್ಯವಾದ ರೂಪುರೇಷೆಗಳನ್ನು ಶಿಫಾರಸ್ಸು ಮಾಡುವ ಸಲುವಾಗಿ ಈಗಾಗಲೇ ರಚಿಸಲಾದ ಸಮಿತಿಗೆ ಸರ್ಕಾರದ ಕಾರ್ಯದರ್ಶಿಗಳು, ಮೂಲಭೂತ ಸೌಕರ್ಯ ಇಲಾಖೆ ಇವರನ್ನು ಸದಸ್ಯರನ್ನಾಗಿ ನೇಮಕ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಉಮಾಪತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಮುಜರಾಯಿ)

ಪಿ.ಆರ್. 2201

## CONSUMER AFFAIRS SECRETARIAT

**Sub :** End to end computerisation of Public Distribution System (PDS) in the State – constitution of State Apex Committee and State Project e-Governance Mission Team (SPeMT) – reg.

**Read :** 1. D.O. Letter No. 21-2/2011-PD-II dated 20-09-2011 from the Secretary, Government of India, Ministry of Consumer Affairs, Food and Public Distribution, Department of Food and Public Distribution, New Delhi.

2. D.O. Letter No. 23 (7) / 2011 PD-II dated 11-10-2011 from the Secretary, Government of India, Ministry of Consumer Affairs, Food and Public Distribution, Department of Food and Public Distribution, New Delhi.

**Preamble:**

The Government of India in its letters read at (1) and (2) above, has emphasized the urgent need for an end to end computerisation of the Public Distribution system in the State in accordance with Hon'ble Supreme Court's order dated 14-09-2011 in Writ Petition (Civil) No. 196/2001 P.U.C.L. Vs. Union of India & others. Further, in accordance with the decision taken in the meeting of Apex Committee held on 29-07-2011 chaired by Cabinet Secretary, four new Mission Mode Projects (MMPs) were included under National e-Governance Plan (NeGP) including computerisation of Public Distribution system.

For computerisation of Public Distribution system under the operational guidelines on NeGP, State Government is required to establish a two-tier structure as mentioned below:

(a) State Apex Committee with Chief Secretary as Chairman and Secretary (Incharge of the Department), representative of Finance Department, HODs of concerned Department, State IT Secretary,NIC Representative, etc.

(b) State Project e-Mission Team (SPeMT) with Secretary In-charge of the Department as Mission Leader, the SPeMT shall comprise of other members as dedicated full-time HOD/Director/Special Secretary, internal domain specialist (fulltime), internal technical fulltime representatives, and representative from SeMT/State IT Department (Full-time), full-time NIC Representative(s), etc.

Hence, the following order.

**GOVERNMENT ORDER NO. FCS 219 DRA 2008, BANGALORE, DATED 21-10-2011.**

Government are pleased to constitute State Apex Committee and State Project e-Mission Team (SPeMT) as follows:

**(I) State Apex Committee:**

| | | | |
|---|---|---|---|
| i. | Chief Secretary to Government of Karnataka | : | Chairman |
| ii. | Secretary to Government, Food, Civil Supplies & Consumer Affairs Department | : | Member Secretary |
| iii. | Principal Secretary to Government, D.P.A.R. (e-Governance) | : | Member |
| iv. | Secretary to Government, Finance Department (Expenditure) | : | Member |
| v. | Commissioner, Food, Civil Supplies & Consumer Affairs Department | : | Member |
| vi. | Managing Director, Karnataka Food & Civil Supplies Corporation Limited | : | Member |
| vii. | Deputy Director General and State Informatics Officer, NIC, Bangalore | : | Member |

**(II) State Project e-Governance Mission Team:**

| | | | |
|---|---|---|---|
| i. | Secretary to Government Food, Civil Supplies & Consumer Affairs Department. | : | Chairman |
| ii. | Additional Secretary to Government, Food, Civil Supplies & Consumer Affairs Department. | : | Member Secretary |
| iii. | Commissioner, Food, Civil Supplies & Consumer Affairs Department | : | Member |
| iv. | Technical Director, NIC, Bangalore | : | Member |
| v. | General Manager, Karnataka Food & Civil Supplies Corporation Limited | : | Member |

By Order and in the name of the Governor of Karnataka,

**Vadagave Basavaraj**

Under Secretary to Government,

Food, Civil Supplies and Consumer Affairs Department.

P.R. No. 2531

## ಪಶುಸಂಗೋಪನೆ ಮತ್ತು ಮೀನುಗಾರಿಕಾ ಸಚಿವಾಲಯ

**ವಿಷಯ** : ಲೆಕ್ಕಶೀರ್ಷಿಕೆ : 2403–00–800–0–59 (ಯೋಜನೆ) ಅಡಿ ಮಂಜೂರಾಗಿರುವ ಗ್ರೂಪ್–ಡಿ ಹುದ್ದೆಗಳನ್ನು ಲೆಕ್ಕಶೀರ್ಷಿಕೆ : 2403–00–101–0–71 (ಯೋಜನೆ) ಇಲ್ಲಿಗೆ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಪಸಂಮೀ 559 ಪಸಸೇ 2009, ದಿನಾಂಕ : 04–02–2011

2. ಪತ್ರ ಸಂಖ್ಯೆ : ಅಪಸಂ/ಯೋಜನೆ–3/ಲೆಕ್ಕಶೀರ್ಷಿಕೆ ಬದಲಾವಣೆ/2009–10, ದಿನಾಂಕ : 30–06 2011 ಹಾಗೂ 19–07–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಬಾಗಲಕೋಟೆ, ಬಳ್ಳಾರಿ, ಉಡುಪಿ, ದಾವಣಗೆರೆ, ಶಿವಮೊಗ್ಗ, ಬೆಳಗಾವಿ, ದಕ್ಷಿಣ ಕನ್ನಡ ಮತ್ತು ರಾಮನಗರ ಜಿಲ್ಲಾ ಪಂಚಾಯತಿ ವ್ಯಾಪ್ತಿಯಲ್ಲಿನ ತಾಲ್ಲೂಕುಗಳ ವಿವಿಧ ಪಶುಚಿಕಿತ್ಸಾಲಯಗಳಿಗೆ ಲೆಕ್ಕಶೀರ್ಷಿಕೆ : 2403–00–800–0–59

(ಯೋಜನೆ) ಅಡಿ ಮಂಜೂರಾಗಿರುವ ಹುದ್ದೆಗಳನ್ನು ಅನುದಾನ ಸಮೇತ ಲೆಕ್ಕಶೀರ್ಷಿಕೆ : 2403–00–101–0–71 (ಯೋಜನೆ) ಇಲ್ಲಿಗೆ ವರ್ಗಾಯಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಬಳ್ಳಾರಿ ತಾಲ್ಲೂಕಿನ ಕೊರ್ಲಗುಂದಿ, ಅಮರಾಪುರ ಮತ್ತು ಕೊಳಗಲ್ಲು ಪಶುಚಿಕಿತ್ಸಾಲಯಗಳಿಗೆ ಲೆಕ್ಕಶೀರ್ಷಿಕೆ : 2403–00–800–0–59 (ಯೋಜನೆ) ಅಡಿ ತಲಾ ಎರಡು ಗ್ರೂಪ್ "ಡಿ" ಹುದ್ದೆಗಳಂತೆ ಒಟ್ಟು 6 ಗ್ರೂಪ್ "ಡಿ" ಹುದ್ದೆಗಳು ಮಂಜೂರಾಗಿರುತ್ತದೆಂದು, ಸದರಿ ಹುದ್ದೆಗಳನ್ನು ಲೆಕ್ಕಶೀರ್ಷಿಕೆ : 2403–00–101–0–71 (ಯೋಜನೆ) ಗೆ ವರ್ಗಾಯಿಸಲು ಪ್ರಸ್ತಾವನೆ ಸಲ್ಲಿಸುವಾಗ ಕಣ್ತಪ್ಪಿನಿಂದ ಪ್ರತಿ ಸಂಸ್ಥೆಯ 2 ಗ್ರೂಪ್ "ಡಿ" ಹುದ್ದೆಗಳ ಬದಲಾಗಿ ಒಂದು ಗ್ರೂಪ್ "ಡಿ" ಹುದ್ದೆ ಎಂದು ನಮೂದಿಸಿದ ಕಾರಣ ದಿನಾಂಕ : 04–02–2011ರ ಸರ್ಕಾರಿ ಆದೇಶದಲ್ಲಿ ಬಳ್ಳಾರಿ ತಾಲ್ಲೂಕಿಗೆ ಮಂಜೂರಾದ 6 ಗ್ರೂಪ್ "ಡಿ" ಹುದ್ದೆಗಳ ಪೈಕಿ 3 ಹುದ್ದೆಗಳು ಮಾತ್ರ ವರ್ಗಾವಣೆಗೊಂಡಿದ್ದು, ಪ್ರತಿ ಸಂಸ್ಥೆಯ ತಲಾ ಒಂದು ಹುದ್ದೆಯಂತೆ ಇನ್ನೂ 3 ಗ್ರೂಪ್–ಡಿ ಹುದ್ದೆಗಳು ಲೆಕ್ಕಶೀರ್ಷಿಕೆ : 2403–00–800–0–59 (ಯೋಜನೆ) ಅಡಿಯಲ್ಲಿಯೇ ಮುಂದುವರೆದಿರುವುದರಿಂದ ಸದರಿ 3 ಹುದ್ದೆಗಳನ್ನೂ ಸಹ ಲೆಕ್ಕಶೀಷಿಕೆ : 2403–00–800–0–59 (ಯೋಜನೆ) ರಿಂದ ಲೆಕ್ಕಶೀರ್ಷಿಕೆ : 2403–00–101–0–71 (ಯೋಜನೆ)ಗೆ ವರ್ಗಾಯಿಸುವಂತೆ ಬಳ್ಳಾರಿ ಜಿಲ್ಲಾ ಉಪ ನಿರ್ದೇಶಕರು ಪರಿಷ್ಕೃತ ಪ್ರಸ್ತಾವನೆ ಸಲ್ಲಿಸಿರುತ್ತಾರೆಂದು ತಿಳಿಸಿರುತ್ತಾರೆ. ಪರಿಷ್ಕೃತ ಪ್ರಸ್ತಾವನೆಯಂತೆ ಕಣ್ತಪ್ಪಿನಿಂದ ಬಿಟ್ಟು ಹೋದ ಉಳಿದ 3 ಗ್ರೂಪ್ "ಡಿ" ಹುದ್ದೆಗಳನ್ನು ಸಹ ಲೆಕ್ಕಶೀರ್ಷಿಕೆ : 2403–00–101–0–71 (ಯೋಜನೆ)ಗೆ ವರ್ಗಾಯಿಸಿ ಆದೇಶ ಹೊರಡಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಬಾಗಲಕೋಟೆ, ಬಳ್ಳಾರಿ, ಉಡುಪಿ, ದಾವಣಗೆರೆ, ಶಿವಮೊಗ್ಗ, ಬೆಳಗಾವಿ, ದಕ್ಷಿಣ ಕನ್ನಡ ಮತ್ತು ರಾಮನಗರ ಜಿಲ್ಲಾ ಪಂಚಾಯತಿ ವ್ಯಾಪ್ತಿಯಲ್ಲಿನ ತಾಲ್ಲೂಕುಗಳ ವಿವಿಧ ಪಶುಚಿಕಿತ್ಸಾಲಯಗಳಿಗೆ ಲೆಕ್ಕಶೀರ್ಷಿಕೆ : 2403–00–800–0–59 (ಯೋಜನೆ) ಅಡಿಯಲ್ಲಿ ಮಂಜೂರಾಗಿರುವ ಹುದ್ದೆಗಳನ್ನು ಅನುದಾನ ಸಮೇತ ಲೆಕ್ಕಶೀರ್ಷಿಕೆ : 2403–00–101–0–71 (ಯೋಜನೆ) ಗೆ ವರ್ಗಾಯಿಸಿದ್ದು, ಅದರಲ್ಲಿ ಬಳ್ಳಾರಿ ತಾಲ್ಲೂಕಿಗೆ ಸಂಬಂಧಿಸಿದಂತೆ ಲೆಕ್ಕಶೀರ್ಷಿಕೆ : 2403–00–800–0–59 (ಯೋಜನೆ) ಅಡಿಯಲ್ಲಿ ಮಂಜೂರಾಗಿದ್ದ ಪಶುವೈದ್ಯರು, ಪಶುವೈದ್ಯಕೀಯ ಪರೀಕ್ಷಕರು ಮತ್ತು ಗ್ರೂಪ್ "ಡಿ" ನೌಕರರ ತಲಾ ಒಂದು ಹುದ್ದೆ ಒಳಗೊಂಡಂತೆ ಒಟ್ಟು 3 ಪಶುವೈದ್ಯರು, 3 ಪಶುವೈದ್ಯಕೀಯ ಪರೀಕ್ಷಕರು ಮತ್ತು 3 ಡಿ–ದರ್ಜೆ ನೌಕರ ಹುದ್ದೆಗಳನ್ನು ಅನುದಾನ ಸಮೇತ ಲೆಕ್ಕಶೀರ್ಷಿಕೆ : 2403–00–101–0–71 (ಯೋಜನೆ) ಇಲ್ಲಿಗೆ ವರ್ಗಾವಣೆ ಮಾಡಲಾಗಿತ್ತು. ಕೊರ್ಲಗುಂದಿ, ಅಮರಾಪುರ ಮತ್ತು ಕೊಳಗಲ್ಲು ಪಶುಚಿಕಿತ್ಸಾಲಯಗಳಿಗೆ ಒಟ್ಟು ತಲಾ ಎರಡರಂತೆ ಒಟ್ಟು 6 ಗ್ರೂಪ್–ಡಿ ಹುದ್ದೆಗಳು ಮಂಜೂರಾಗಿದ್ದು ಪೈಕಿ 3 ಗ್ರೂಪ್–ಡಿ ಹುದ್ದೆಗಳು (ಪ್ರತಿ ಸಂಸ್ಥೆಗೆ ತಲಾ ಒಂದರಂತೆ) ಮಾತ್ರ ಲೆಕ್ಕಶೀರ್ಷಿಕೆ : 2403–00–101–0–71 (ಯೋಜನೆ)ಗೆ ಅನುದಾನ ಸಮೇತ ವರ್ಗಾವಣೆಗೊಂಡಿರುತ್ತದೆ. ಉಳಿದ ಮೂರು ಗ್ರೂಪ್–ಡಿ ಹುದ್ದೆಗಳು (ಪ್ರತಿ ಸಂಸ್ಥೆಗೆ ತಲಾ ಒಂದರಂತೆ) ಲೆಕ್ಕಶೀರ್ಷಿಕೆ : 2403–00–800–0–59 (ಯೋಜನೆ) ಅಡಿ ಮುಂದುವರೆದಿದ್ದು ಅವುಗಳನ್ನೂ ಸಹ ಲೆಕ್ಕಶೀರ್ಷಿಕೆ : 2403–00–101–0–71 (ಯೋಜನೆ) ಗೆ ಅನುದಾನ ಸಮೇತ ವರ್ಗಾಯಿಸಲು ಕ್ರಮ ಕೈಗೊಳ್ಳಬೇಕಾಗುತ್ತದೆ. ವರ್ಗಾವಣೆ ಮಾಡದಿದ್ದಲ್ಲಿ ಸದರಿ ಲೆಕ್ಕಶೀರ್ಷಿಕೆ ಅಡಿ ಕಾರ್ಯನಿರ್ವಹಿಸುತ್ತಿರುವ ನೌಕರರಿಗೆ ವೇತನ ಸೆಳೆಯಲು ತೊಂದರೆಯಾಗುತ್ತದೆ. ಈ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ, ಬಳ್ಳಾರಿ ಜಿಲ್ಲೆ ಬಳ್ಳಾರಿ ತಾಲ್ಲೂಕಿನ ಕೊರ್ಲಗುಂದಿ, ಅಮರಾಪುರ ಮತ್ತು ಕೊಳಗಲ್ಲು ಪಶುಚಿಕಿತ್ಸಾಲಯಗಳಿಗೆ ಲೆಕ್ಕಶೀರ್ಷಿಕೆ : 2403–00–800–0–59 (ಯೋಜನೆ) ಅಡಿ ಮಂಜೂರಾಗಿರುವ 6 ಗ್ರೂಪ್–ಡಿ ಹುದ್ದೆಗಳ ಪೈಕಿ ಈಗಾಗಲೇ ವರ್ಗಾವಣೆಗೊಂಡಿರುವ 3 ಗ್ರೂಪ್–ಡಿ ಹುದ್ದೆಗಳ ಜೊತೆಗೆ ಬಿಟ್ಟುಹೋಗಿರುವ ಇನ್ನೂ ಮೂರು ಗ್ರೂಪ್–ಡಿ ಹುದ್ದೆಗಳನ್ನು (ಪ್ರತಿ ಸಂಸ್ಥೆಗೆ ತಲಾ ಒಂದರಂತೆ) ಲೆಕ್ಕಶೀರ್ಷಿಕೆ : 2403–00–800–0–59 (ಯೋಜನೆ) ರಿಂದ ಲೆಕ್ಕಶೀರ್ಷಿಕೆ : 2403–00–101–0–71 (ಯೋಜನೆ) ಇಲ್ಲಿಗೆ ಅನುದಾನ ಸಮೇತ ವರ್ಗಾಯಿಸಲು ತೀರ್ಮಾನಿಸಿದೆ. ಆದ್ದರಿಂದ ಈಳ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಪಸಂಮೀ 191 ಪಸಸೇ 2011, ಬೆಂಗಳೂರು, ದಿನಾಂಕ : 5ನೇ ಸೆಪ್ಟೆಂಬರ್ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ, ಬಳ್ಳಾರಿ ಜಿಲ್ಲೆ ಬಳ್ಳಾರಿ ತಾಲ್ಲೂಕಿನ ಕೊರ್ಲಗುಂದಿ, ಅಮರಾಪುರ ಮತ್ತು ಕೊಳಗಲ್ಲು ಪಶುಚಿಕಿತ್ಸಾಲಯಗಳಿಗೆ ಲೆಕ್ಕಶೀರ್ಷಿಕೆ : 2403–00–800–0–59 (ಯೋಜನೆ) ಅಡಿ ಮಂಜೂರಾಗಿರುವ 6 ಗ್ರೂಪ್–ಡಿ ಹುದ್ದೆಗಳ ಪೈಕಿ ಸರ್ಕಾರಿ ಆದೇಶ ಸಂಖ್ಯೆ : ಪಸಂಮೀ 559 ಪಸಸೇ 2009, ದಿನಾಂಕ : 04–02–2011ರನ್ವಯ ಈಗಾಗಲೇ ಲೆಕ್ಕಶೀರ್ಷಿಕೆ : 2403–00–101–0–71 (ಯೋಜನೆ) ಇಲ್ಲಿಗೆ ವರ್ಗಾವಣೆಗೊಂಡಿರುವ 3 ಗ್ರೂಫ್ "ಡಿ" ಹುದ್ದೆಗಳ ಜೊತೆಗೆ ಕಣ್ತಪ್ಪಿನಿಂದ ಬಿಟ್ಟು ಹೋಗಿ ಲೆಕ್ಕಶೀರ್ಷಿಕೆ : 2403–00–800–0–59 (ಯೋಜನೆ) ಅಡಿಯಲ್ಲಿಯೇ ಮುಂದುವರೆದಿರುವ ಇನ್ನೂ ಮೂರು ಗ್ರೂಪ್ "ಡಿ" ಹುದ್ದೆಗಳನ್ನು (ಪ್ರತಿ ಸಂಸ್ಥೆಗೆ ತಲಾ ಒಂದರಂತೆ) ಲೆಕ್ಕಶೀರ್ಷಿಕೆ : 2403–00–800–0–59 (ಯೋಜನೆ) ರಿಂದ ಲೆಕ್ಕಶೀರ್ಷಿಕೆ : 2403–00–101–0–71 (ಯೋಜನೆ) ಇಲ್ಲಿಗೆ ಅನುದಾನ ಸಮೇತ ವರ್ಗಾಯಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ : ಆಇ 379 ವೆ. 4/2011, ದಿನಾಂಕ : 25–08–2011 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ನಾಗರಾಜ**

ಪೀಠಾಧಿಕಾರಿ–2

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ

(ಪಶುಸಂಗೋಪನೆ–ಎ).

ಪಿ.ಆರ್. 2202

## ಪಶುಸಂಗೋಪನೆ ಮತ್ತು ಮೀನುಗಾರಿಕಾ ಸಚಿವಾಲಯ

ತಿದ್ದುಪಡಿ

ಸಂಖ್ಯೆ : ಪಸಂಮೀ 228 ಪಸಸೇ 2011, ಬೆಂಗಳೂರು ದಿನಾಂಕ : 29-08-2011.

ಸರ್ಕಾರಿ ಆದೇಶ ಸಂಖ್ಯೆ : ಪಸಂಮೀ 547 ಪಸಸೇ 2009, ದಿನಾಂಕ : 04-03-2011 ರಲ್ಲಿನ ಕ್ರಮ ಸಂಖ್ಯೆ : 123 (ಜೇಷ್ಠತಾ ಸಂಖ್ಯೆ : 672) ಮುಂದೆ 'ಡಾ॥ ಸತೀಶ್. ವಿ.ಆರ್., ದೊಡ್ಡರೋಗ ನಿವಾರಣಾ ಯೋಜನೆ, ಮಡಿಕೇರಿ, ಕೊಡಗು ಜಿಲ್ಲೆ' ಎಂದು ನಮೂದಾಗಿರುವುದನ್ನು 'ಡಾ॥ ವಿ.ಆರ್. ಸುರೇಶ್., ದೊಡ್ಡರೋಗ ನಿವಾರಣಾ ಯೋಜನೆ, ಮಡಿಕೇರಿ, ಕೊಡಗು ಜಿಲ್ಲೆ' ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಉಳಿದಂತೆ ದಿನಾಂಕ : 04-03-2011 ರ ಆದೇಶದಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2203

**ಎಂ.ಪಿ. ನಾಗರಾಜ**
ಪೀಠಾಧಿಕಾರಿ-2
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ
(ಪಶುಸಂಗೋಪನೆ-ಎ).

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಕೃಷಿ ಅರಣ್ಯ ಪ್ರೋತ್ಸಾಹ ಯೋಜನೆ ಹಾಗೂ ರಸ್ತೆ ಬದಿ ನೆಡುತೋಪು ಯೋಜನಾ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಸಾಮಾಜಿಕ ಅರಣ್ಯ ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಹಾಗೂ ಸಾಮಾಜಿಕ ಅರಣ್ಯ ವಲಯಗಳ ವಲಯ ಅರಣ್ಯಾಧಿಕಾರಿಗಳಿಗೆ ರಾಜ್ಯ ವಲಯ ಯೋಜನೆ ಲೆಕ್ಕ ಶೀರ್ಷಿಕೆಯಡಿಯ ಅನುದಾನವನ್ನು ಡ್ರಾ ಮಾಡಲು ಅನುಮತಿ ನಿಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಅಪಜೀ 108 ಎಫ್ಎಪಿ 2011, ದಿನಾಂಕ 29-05-2011.
2. ಸರ್ಕಾರದ ಆದೇಶ ಸಂಖ್ಯೆ: ಅಪಜೀ 108 ಎಫ್ಎಪಿ 2011, ದಿನಾಂಕ 07-05-2011.
3. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳ ಪತ್ರ ಸಂಖ್ಯೆ : ಡಿ1/ಬಿಯುಡಿ/ಸಿಆರ್-99/2011-12, ದಿನಾಂಕ : 15-06-2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳ ದಿನಾಂಕ : 15-08-2011ರ ಪತ್ರದಲ್ಲಿ ಕ್ರಮ ಸಂಖ್ಯೆ (1) ಮತ್ತು (2)ರಲ್ಲಿ ನಮೂದಿಸಿರುವ ಸರ್ಕಾರದ ಆದೇಶಗಳಲ್ಲಿ ಈ ಕೆಳಕಂಡ ಕಾರ್ಯಕ್ರಮಗಳಿಗೆ ಮಂಜೂರಾತಿ ನೀಡಿದ್ದು, ವಿವರ ಕೆಳಗಿನಂತಿದೆ.

1. ಕೃಷಿ ಅರಣ್ಯ ಪ್ರೋತ್ಸಾಹ ಯೋಜನೆಯಡಿ ರೈತರ ಜಮೀನಿನಲ್ಲಿ ಸಸಿಗಳನ್ನು ಬೆಳೆಸಲು ರೈತರು ಬಯಸಿದ ಸಸಿಗಳನ್ನು ವಿತರಿಸಿ ಪ್ರೋತ್ಸಾಹಿಸುವುದು ಹಾಗೂ ಈ ಯೋಜನೆಯಲ್ಲಿ ನೆಟ್ಟ ಸಸಿಗಳನ್ನು ಪೋಷಿಸಿ ರಕ್ಷಿಸುವ ರೈತರಿಗೆ/ಸಾರ್ವಜನಿಕರಿಗೆ ಹಾಗೂ ಸಂಘ ಸಂಸ್ಥೆಗಳಿಗೆ ಬದುಕುಳಿದ ಗಿಡಗಳ ಸಂಖ್ಯೆಗಳಿಗನುಗುಣವಾಗಿ ಪ್ರೋತ್ಸಾಹ ಧನ ನೀಡುವ ಉದ್ದೇಶ ಹೊಂದಿದೆ. ಪ್ರಸ್ತುತ ವರ್ಷದಲ್ಲಿ ಈ ಕಾರ್ಯಕ್ಕಾಗಿ ಮುಂದುವರಿಯುತ್ತಿರುವ ರಾಜ್ಯ ವಲಯ ಯೋಜನೆ ಲೆಕ್ಕ ಶೀರ್ಷಿಕೆ 2406-01-102-2-22-ಸಾರ್ವಜನಿಕ ವಿತರಣೆಗೆ ಸಸಿ ಬೆಳೆಸುವುದು-139-ಪ್ರಧಾನ ಕಾಮಗಾರಿ ಇದರಡಿ ರೂ. 500.00 ಲಕ್ಷ ಅನುದಾನಕ್ಕೆ ಅವಕಾಶ ಕಲ್ಪಿಸಲಾಗಿದೆ.
2. 2000ನೇ ವರ್ಷದಿಂದ ಈಚೆಗೆ ಅನೇಕ ರಸ್ತೆ ಬದಿಯ ಮರಗಳನ್ನು ರಸ್ತೆ ಅಗಲೀಕರಣಕ್ಕಾಗಿ ಕಡಿತಲೆ ಮಾಡಿದ್ದು, ರಸ್ತೆ ಬದಿಯ ನೆಡುತೋಪು ಬೆಳೆಸುವುದನ್ನು ಆದ್ಯತೆಯ ಮೇಲೆ ಕೈಗೊಳ್ಳಬೇಕಾಗಿದೆ. ಈ ಹಿನ್ನಲೆಯಲ್ಲಿ 2011-12ನೇ ಸಾಲಿನ ಆಯವ್ಯಯ ಅಂದಾಜಿನಲ್ಲಿ ರಾಜ್ಯ ವಲಯ ಯೋಜನೆ ಲೆಕ್ಕ ಶೀರ್ಷಿಕೆ 2406-01-102-2-18-ರಸ್ತೆ ಬದಿ ನೆಡುತೋಪು ಬೆಳೆಸುವುದು ಇದರಡಿಯ ಮೂರು ಉಪ ಲೆಕ್ಕ ಶೀರ್ಷಿಕೆಗಳಡಿ ಒಟ್ಟು ರೂ. 130.00 ಲಕ್ಷ ಅನುದಾನಕ್ಕೆ ಅವಕಾಶ ಕಲ್ಪಿಸಲಾಗಿದೆ.

ಈ ಕಾರ್ಯಕ್ರಮಗಳನ್ನು ರಾಜ್ಯ ವಲಯದಡಿ ಕಾರ್ಯನಿರ್ವಹಿಸುವ ಪ್ರಾದೇಶಿಕ ಘಟಕಗಳು ಹಾಗೂ ಜಿಲ್ಲಾ ವಲಯದಡಿ ಕಾರ್ಯನಿರ್ವಹಿಸುವ ಸಾಮಾಜಿಕ ಅರಣ್ಯ ಘಟಕಗಳ ವತಿಯಿಂದ ಅನುಷ್ಠಾನಗೊಳಿಸಬೇಕಾಗಿದೆ.

ಚಾಲ್ತಿಯಲ್ಲಿರುವ ನಿಯಮಗಳ ಪ್ರಕಾರ ಸಾಮಾಜಿಕ ಅರಣ್ಯ ವಿಭಾಗಗಳ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು/ವಲಯ ಅರಣ್ಯಾಧಿಕಾರಿಗಳು ಜಿಲ್ಲಾ ಪಂಚಾಯತಿ ವ್ಯಾಪ್ತಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವುದರಿಂದ ಕಾರ್ಯಕ್ರಮಗಳಿಗೆ ಈಗಾಗಲೇ ರಾಜ್ಯ ವಲಯದ ಯೋಜನಾ ಲೆಕ್ಕ ಶೀರ್ಷಿಕೆ 2406-01-102-2-18- Road Side Plantation-139-Major Works, 422-Special Component Plan (SCP) Distribution-139-Major Works ಇವುಗಳಡಿ ಅನುದಾನಕ್ಕೆ ಅವಕಾಶ ಕಲ್ಪಿಸಲಾಗಿದ್ದು, ಒಟ್ಟಾರೆ ಈ ಕಾರ್ಯಕ್ರಮಗಳನ್ನು ಪ್ರಾದೇಶಿಕ ವಿಭಾಗಗಳ ಮತ್ತು ಸಾಮಾಜಿಕ ಅರಣ್ಯ ವಿಭಾಗಗಳ ಉಪ ಅರಣ್ಯ ಸಂರಕ್ಷಣಾಧಿಕಾರಿ ಮತ್ತು ವಲಯ ಅರಣ್ಯಾಧಿಕಾರಿಗಳು ಅನುಷ್ಠಾನಗೊಳಿಸಿ ಈ ಲೆಕ್ಕ ಶೀರ್ಷಿಕೆಗಳಡಿಯ ಅನುದಾನವನ್ನು ಡ್ರಾ ಮಾಡಿ ಪಾವತಿಸಬೇಕಾಗುತ್ತದೆ. ಆದುದರಿಂದ, ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ 2011-12ನೇ ಸಾಲಿನ ಆಯವ್ಯಯ ಅಂದಾಜಿನಲ್ಲಿ ಕೃಷಿ ಅರಣ್ಯ ಪ್ರೋತ್ಸಾಹ ಯೋಜನೆ ಮತ್ತು ರಸ್ತೆ ಬದಿ ನೆಡುತೋಪು ಯೋಜನೆಯ ಅನುಷ್ಠಾನಕ್ಕಾಗಿ ರಾಜ್ಯ ವಲಯದಡಿಯ ಯೋಜನಾ ಲೆಕ್ಕ ಶೀರ್ಷಿಕೆ 2406-01-102-2-22-Raising of Seedlings for Public Distribution-139 Major works" ಮತ್ತು 2406-01-102-2-18-Road Side Plantation-139 Major works, 422-Special Component Plan (SCP), 433-Trible Sub Plan (TSP)" ಇವುಗಳಡಿಯ ಅನುದಾನವನ್ನು ಸಾಮಾಜಿಕ ಅರಣ್ಯ ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಮತ್ತು ಸಾಮಾಜಿಕ ಅರಣ್ಯ ವಲಯಗಳ ವಲಯ ಅರಣ್ಯಾಧಿಕಾರಿಗಳು ಖಜಾನೆ ಮೂಲಕ white bill ನಲ್ಲಿ ಡ್ರಾ ಮಾಡಲು ಅನುಮತಿ ನೀಡಿ ಸೂಕ್ತ ಆದೇಶ ಹೊರಡಿಸುವಂತೆ ಹಾಗೂ ಮೇಲೆ ನಮೂದಿಸಿರುವ ರಾಜ್ಯ ವಲಯ ಯೋಜನಾ ಲೆಕ್ಕ ಶೀರ್ಷಿಕೆಗಳಡಿಯ ಅನುದಾನವನ್ನು ಸಾಮಾಜಿಕ ಅರಣ್ಯ ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಮತ್ತು ಸಾಮಾಜಿಕ ಅರಣ್ಯ ವಲಯಗಳ

ಅರಣ್ಯಾಧಿಕಾರಿಗಳು ಡ್ರಾ ಮಾಡಲು ಅವರ ಡಿಡಿಓ ಸಂಖ್ಯೆಗೆ ಖಜಾನೆ ಗಣಕ ಜಾಲ ನಿರ್ವಹಣಾ ಕೇಂದ್ರದ ಮೂಲಕ ದಾಖಲಿಸಲು ಸಹ ಅನುಮತಿ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಅಪಜೀ 183 ಎಫ್ ಎಪಿ 2011, ಬೆಂಗಳೂರು, ದಿನಾಂಕ : 03–09–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2011–12 ನೇ ಸಾಲಿನ ಆಯವ್ಯಯ ಅಂದಾಜಿನಲ್ಲಿ ಕೃಷಿ ಅರಣ್ಯ ಪ್ರೋತ್ಸಾಹ ಯೋಜನೆ ಮತ್ತು ರಸ್ತೆ ಬದಿ ನೆಡುತೋಪು ಯೋಜನೆಯ ಅನುಷ್ಠಾನಕ್ಕಾಗಿ ರಾಜ್ಯ ವಲಯದಡಿಯ ಯೋಜನಾ ಲೆಕ್ಕ ಶೀರ್ಷಿಕೆ "2406–01–102–2–22–Raising of Seedlilngs for Public Distribution-139 Major works" ಮತ್ತು "2406-01-102-2-18-Road Side Plantation-139 Major works" ಇವುಗಳಡಿಯ ಅನುದಾನವನ್ನು ಸಾಮಾಜಿಕ ಅರಣ್ಯ ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಮತ್ತು ಸಾಮಾಜಿಕ ಅರಣ್ಯ ವಲಯಗಳ ವಲಯ ಅರಣ್ಯಾಧಿಕಾರಿಗಳು ಖಜಾನೆ ಮೂಲಕ white bill ನಲ್ಲಿ ಡ್ರಾ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ ಹಾಗೂ ಅವರ ಡಿಡಿಓ ಸಂಖ್ಯೆಗೆ ಖಜಾನೆ ಗಣಕಜಾಲ ನಿರ್ವಹಣಾ ಕೇಂದ್ರದ ಮೂಲಕ ದಾಖಲಿಸಲು ಸಹ ಅನುಮತಿ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಎಫ್ ಡಿ 710 ವೆಚ್ಚ–5, 2011, ದಿನಾಂಕ 23–08–2011ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಪಿ. ರಾಮಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

ಪಿ.ಆರ್. 2204

## INFRASTRUCTURE DEVELOPMENT SECRETARIAT

**Sub :** Sanction of Rs. 5.00 lakhs as sponsorship contribution to Confederation of Indian Industry (CII) Chennai, as "Support State" Suminfra 2011-reg.

**Read :** Letter dated 08-07-2011 from the Chairman Suminfra 2011, Confederation of Indian Industry & President (O), Larsen & Tourbo Ltd. Chennai.

**Preamble:**

The Chairman Suminfra 2011, in his letter read at above has informed that Confederation of Indian Industry (SR) is organizing the 9th Edition of its annual summit on Sustainable PPP's Infrastructure Suminfra 2011 on 21-22 September 2011 at Hotel Taj Krishna, Hyderabad.

Further he has stated that, suminfra is a unique forum promoted by the CII jointly with the State Governments in southern region, to promote public private partnership in infrastructure development in southern States. Suminfra enables the policy makers to appreciate the risk percepations and concerns of the industry, which need to be addressed. It also helps financial institutions to understand critical issues related Infrastructure projects. Besides, Suminfra would also showcase private sector experience with PPPs in Infrastructure.

In view of this, the CII, Chennai, has seek Government of Karnataka's participation and support as 'Support State' at the Suminfra 2011, by way of sponsorship and requested to contribute Rs. 5.00 lakhs in this regard, Hence the following order.

**Government Order No. IDD 88 ITS 2011, Bangalore, Dated 06-09-2011**

After careful examination of the proposal of the CII, Chennai, Government is pleased to sanction Rs. 5.00 lakhs (Rupees five lakhs only) contribution for participation and support as 'support State' at the Suminfra 2011 by way of sponsorship to CII, Chennai.

2. The expenditure shall be met out under the head of account 3451-00-090-1-06-059 infrastructure preliminary studies other expenditure (plan) 2011-12.

3. The Managing Director, KSIIDC is authorized to draw this amount on a payees receipt duly counter signed by the Under Secretary to Govt., Infrastructure Development Department by State Huzoor Treasury, Bangalore.

4. The cheque/DD shall be drawn in favour of Confederation of Indian Industry.

5. This order is issued in accordance with the delegation of financial powers to Principal Secretary to Govt., vide G.O. No. FD 1 TFP 2008 dated 16-05-2008.

By Order and in the name of the Governor of Karnataka,

**R.Shivalingaiah**

Under Secretary to Government,

Infrastructure Development Department

PR. 2205

## ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಸಚಿವಾಲಯ

**ವಿಷಯ :** ಮೈಸೂರು, ಶಿವಮೊಗ್ಗ ಮತ್ತು ಧಾರವಾಡ ರಂಗಾಯಣಗಳಿಗೆ ನಿರ್ದೇಶಕರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :** ದಿನಾಂಕ : 04–07–2011 ರಂದು ನಡೆದ ರಂಗಸಮಾಜದ ಸಭೆಯ ನಡವಳಿ.

**ಪ್ರಸ್ತಾವನೆ:**

ದಿನಾಂಕ : 04–07–2011 ರಂದು ಮಾನ್ಯ ಕನ್ನಡ ಮತ್ತು ಸಂಸ್ಕೃತಿ, ಸಣ್ಣ ನೀರಾವರಿ ಸಚಿವರು ಹಾಗೂ ಅಧ್ಯಕ್ಷರು, ರಂಗಸಮಾಜ, ರಂಗಾಯಣ ಮೈಸೂರು ಇವರ ಅಧ್ಯಕ್ಷತೆಯಲ್ಲಿ ನಡೆದ ರಂಗ ಸಮಾಜದ ಸಭೆಯಲ್ಲಿ ಮೈಸೂರಿನ ರಂಗಾಯಣದ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದ ಪ್ರೊ. ಲಿಂಗದೇವರು ಹಳೇಮನೆ ಇವರ ನಿಧನದಿಂದ ತೆರವಾಗಿರುವ ಹಾಗೂ ಸ್ವತಂತ್ರವಾಗಿ ಶಿವಮೊಗ್ಗ ಮತ್ತು ಧಾರವಾಡದಲ್ಲಿ ಪ್ರಾರಂಭಿಸಲಾಗುವ ರಂಗಾಯಣಗಳಿಗೆ ನಿರ್ದೇಶಕರನ್ನು ನೇಮಿಸುವ ಕುರಿತಂತೆ ಸಮಗ್ರವಾಗಿ ಚರ್ಚಿಸಿರುವ ಮೇರೆಗೆ ಈ ಕೆಳಕಂಡವರುಗಳನ್ನು ಮೈಸೂರು, ಶಿವಮೊಗ್ಗ ಹಾಗೂ ಧಾರವಾಡ ರಂಗಾಯಣದ ನಿರ್ದೇಶಕರನ್ನಾಗಿ ನೇಮಿಸುವ ಬಗ್ಗೆ ಪರಿಶೀಲಿಸಲಾಗಿದೆ. ಅದರಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಕಸಂವಾಪ್ರ 522 ಕಸಧ 2011, ಬೆಂಗಳೂರು, ದಿನಾಂಕ: 05ನೇ ಸೆಪ್ಟೆಂಬರ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಈ ಕೆಳಕಂಡ ಗಣ್ಯರನ್ನು ಮೈಸೂರು, ಶಿವಮೊಗ್ಗ ಹಾಗೂ ಧಾರವಾಡ ರಂಗಾಯಣದ ನಿರ್ದೇಶಕರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

3. ಮೈಸೂರು ರಂಗಾಯಣ – ಡಾ॥ ಬಿ.ವಿ. ರಾಜಾರಾಂ, ಬೆಂಗಳೂರು.
4. ಶಿವಮೊಗ್ಗ ರಂಗಾಯಣ – ಶ್ರೀ ಹೊ.ನಾ. ಸತ್ಯನಾರಾಯಣ, ಶಿವಮೊಗ್ಗ.
5. ಧಾರವಾಡ ರಂಗಾಯಣ – ಶ್ರೀ ಏಣಗಿ ನಟರಾಜ್, ಧಾರವಾಡ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸುಧಾಕರ ಶೆಟ್ಟಿ**

ಸರ್ಕಾರದ ಉಪ ಕಾರ್ಯದರ್ಶಿ

ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ

ಪಿಆರ್.ನಂ. 2206

## ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಸಚಿವಾಲಯ

**ವಿಷಯ :** ಕರ್ನಾಟಕ ನಾಟಕ ಅಕಾಡೆಮಿಯ ಅಧ್ಯಕ್ಷರ ನೇಮಕಾತಿ ಬಗ್ಗೆ.

**ಪ್ರಸ್ತಾವನೆ:**

ಕರ್ನಾಟಕ ನಾಟಕ ಅಕಾಡೆಮಿಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿರುವ ಡಾ॥ ಬಿ.ವಿ. ರಾಜಾರಾಂ ರವರನ್ನು ರಂಗಾಯಣ ಮೈಸೂರು ಇದರ ನಿರ್ದೇಶಕರನ್ನಾಗಿ ನೇಮಿಸಿರುವುದರಿಂದ ತೆರವಾಗಿರುವ ಕರ್ನಾಟಕ ನಾಟಕ ಅಕಾಡೆಮಿಯ ಅಧ್ಯಕ್ಷರ ಹುದ್ದೆಗೆ ಅರ್ಹರನ್ನು ನೇಮಿಸುವ ಬಗ್ಗೆ ಪರಿಶೀಲಿಸಲಾಗಿದೆ. ಅದರಂತೆ ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಕಸಂವಾಪ್ರ 522 ಕಸಧ 2011, ಬೆಂಗಳೂರು, ದಿನಾಂಕ: 05ನೇ ಸೆಪ್ಟೆಂಬರ್ 2011**

ಶ್ರೀಮತಿ ಮಾಲತಿ ಸುಧೀರ್ ಇವರನ್ನು ಕರ್ನಾಟಕ ನಾಟಕ ಅಕಾಡೆಮಿ, ಬೆಂಗಳೂರು ಇದರ ಅಧ್ಯಕ್ಷರಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸುಧಾಕರ ಶೆಟ್ಟಿ**

ಸರ್ಕಾರದ ಉಪ ಕಾರ್ಯದರ್ಶಿ

ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ

ಪಿಆರ್.ನಂ. 2207

## ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವ್ಯಾಪ್ತಿಯಲ್ಲಿನ ಅಕಾಡೆಮಿಗಳಿಗೆ ಅಧ್ಯಕ್ಷರನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ :** ಪತ್ರ ಸಂಖ್ಯೆ : ಕಸನಿ : 19 : ಅಕಾಡೆಮಿ : 2011–12, ದಿನಾಂಕ : 22–08–2011.

**ಪ್ರಸ್ತಾವನೆ:**

ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ, ಕರ್ನಾಟಕ ಯಕ್ಷಗಾನ ಬಯಲಾಟ ಅಕಾಡೆಮಿ ಹಾಗೂ ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿಗಳಿಗೆ ನೇಮಿಸಿರುವ ಅಧ್ಯಕ್ಷರ ಅಧಿಕಾರಾವಧಿಯು 2011ರ ಆಗಸ್ಟ್ ತಿಂಗಳಿನಲ್ಲಿ ಕೊನೆಗೊಂಡಿರುವುದರಿಂದ, ಈ ಮೂರು ಅಕಾಡೆಮಿಗಳಿಗೆ ನೂತನ ಅಧ್ಯಕ್ಷರನ್ನು ನೇಮಕ ಮಾಡುವ ಕುರಿತಂತೆ ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರು ಮೇಲೆ ಓದಲಾದ ಪತ್ರದಲ್ಲಿ ಸಂಭಾವ್ಯ ಅಭ್ಯರ್ಥಿಗಳ ಪಟ್ಟಿಯನ್ನು ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಟ್ಟಿರುತ್ತಾರೆ. ಸದರಿ ಅಕಾಡೆಮಿಗಳಿಗೆ ಅಧ್ಯಕ್ಷರನ್ನು ನೇಮಿಸುವ ಬಗ್ಗೆ ಪರಿಶೀಲಿಸಲಾಗಿದೆ. ಈ ಮೇರೆಗೆ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಕಸಂವಾಪ್ರ 499 ಕಸಧ 2011, ಬೆಂಗಳೂರು, ದಿನಾಂಕ: 05ನೇ ಸೆಪ್ಟೆಂಬರ್ 2011**

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಈ ಕೆಳಕಂಡ ಅಕಾಡೆಮಿಗಳಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡವರುಗಳನ್ನು ಅಕಾಡೆಮಿ ಅಧ್ಯಕ್ಷರನ್ನಾಗಿ ನೇಮಕ ಮಾಡಿ ಆದೇಶ ಹೊರಡಿಸಿದೆ.

1. ಪ್ರೊ. ಎಂ. ಲಕ್ಷ್ಮೀನಾರಾಯಣ ಸಾಮಗ ಮಲ್ಪೆ, ಉಡುಪಿ ಜಿಲ್ಲೆ – ಕರ್ನಾಟಕ ಯಕ್ಷಗಾನ ಬಯಲಾಟ ಅಕಾಡೆಮಿಯ ಅಧ್ಯಕ್ಷರನ್ನಾಗಿ.
2. ಶ್ರೀ ಕಾಸರಗೋಡ್ ಚಿನ್ನ (ಶ್ರೀನಿವಾಸ ರಾವ್ ಎಸ್.) – ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರನ್ನಾಗಿ.
3. ಶ್ರೀಮತಿ ವೈಜಯಂತಿ ಕಾಶಿ, ಬೆಂಗಳೂರು – ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ಅಧ್ಯಕ್ಷರನ್ನಾಗಿ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸುಧಾಕರ ಶೆಟ್ಟಿ**

ಸರ್ಕಾರದ ಉಪ ಕಾರ್ಯದರ್ಶಿ

ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ

ಪಿಆರ್.ನಂ. 2208

## ಒಳಾಡಳಿತ ಸಚಿವಾಲಯ

**ವಿಷಯ :** ಪೊಲೀಸ್ ಸುಧಾರಣೆಗಳು – ಪೊಲೀಸ್ ದೂರುಗಳ ಪ್ರಾಧಿಕಾರದ ರಚನೆ – ಕುರಿತು.

**ಓದಲಾಗಿದೆ :**
1. ಶ್ರೀ ಪ್ರಕಾಶ್ ಸಿಂಗ್ ಮತ್ತು ಇತರರು–ವಿರುದ್ಧ–ಭಾರತ ಒಕ್ಕೂಟ ಮತ್ತು ಇತರರು ಸಲ್ಲಿಸಿದ್ದ ರಿಟ್ ಅರ್ಜಿ ಸಂಖ್ಯೆ : 310/1996 ದಿನಾಂಕ : 22–09–2006ರ ಸಂಬಂಧದಲ್ಲಿ ಸರ್ವೋಚ್ಚ ನ್ಯಾಯಾಲಯ ನೀಡಿರುವ ತೀರ್ಪು.
2. ಪೊಲೀಸ್ ಮಹಾ ನಿರ್ದೇಶಕರು ಮತ್ತು ಮಹಾ ನಿರೀಕ್ಷಕರು, ಬೆಂಗಳೂರು–ಇವರ ಪತ್ರ ಸಂಖ್ಯೆ : ಕಾನೂನು (1) 52/2005, ದಿನಾಂಕ : 10–02–2009.
3. ಪೊಲೀಸ್ ಮಹಾ ನಿರ್ದೇಶಕರು ಮತ್ತು ಮಹಾ ನಿರೀಕ್ಷಕರ ಪತ್ರ ಸಂಖ್ಯೆ : ಕಾನೂನು (1) 52/2005, ದಿನಾಂಕ : 10–09–2009.
4. ಸರ್ಕಾರದ ಆದೇಶ ಸಂಖ್ಯೆ : ಒಇ 59 ಪೊಸಇ 2009 ದಿನಾಂಕ : 03–12–2010.
5. ಮಾನ್ಯ ಮುಖ್ಯ ಕಾರ್ಯದರ್ಶಿಗಳು, ಮಾನ್ಯ ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಿಗೆ ಬರೆದ ಅರೆ ಸರ್ಕಾರಿ ಪತ್ರ ಸಂಖ್ಯೆ : ಒಇ 59 ಪೊಸಇ 2009 (ಭಾಗ) ದಿನಾಂಕ : 20–07–2011.
6. ಮಾನ್ಯ ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರ ಪತ್ರ ದಿನಾಂಕ : 21–01–2011.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ವೋಚ್ಚ ನ್ಯಾಯಾಲಯದ ತೀರ್ಪಿನಲ್ಲಿ ಪೊಲೀಸ್ ಸುಧಾರಣೆಗೆ ಸಂಬಂಧಿಸಿದಂತೆ ನೀಡಿರುವ ಆರು ನಿರ್ದೇಶನಗಳನ್ವಯ ಮೇಲೆ (4)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಪೊಲೀಸ್ ದೂರುಗಳ ಪ್ರಾಧಿಕಾರವನ್ನು ರಚಿಸಲಾಗಿದ್ದು, ಸದರಿ ಆದೇಶದಲ್ಲಿ ಪೊಲೀಸ್ ದೂರುಗಳ ಪ್ರಾಧಿಕಾರದ ರಚನೆಯನ್ನು ಈ ಕೆಳಕಂಡಂತೆ ವಿಷದಪಡಿಸಲಾಗಿದೆ.

"1 ರಾಜ್ಯ ಪೊಲೀಸ್ ದೂರುಗಳ ಪ್ರಾಧಿಕಾರ :

(1) ರಚನೆ

1. ಉಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶರು – ಅಧ್ಯಕ್ಷರು ಸರ್ಕಾರವು, ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಗಳು ಸೂಚಿಸಿದ ನ್ಯಾಯಾಧೀಶರ ಹೆಸರುಗಳ ಪಟ್ಟಿಯಿಂದ ಒಬ್ಬರನ್ನು ಅಧ್ಯಕ್ಷರನ್ನಾಗಿ ಆಯ್ಕೆ ಮಾಡತಕ್ಕದ್ದು."

ಅದರನ್ವಯ ಮೇಲೆ ಓದಲಾದ (5)ರಲ್ಲಿ ಮುಖ್ಯ ಕಾರ್ಯದರ್ಶಿಯವರು ಮಾನ್ಯ ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಗಳನ್ನು ಕೋರಿದ್ದು, ಮೇಲೆ ಓದಲಾದ (6)ರಲ್ಲಿ ಮಾನ್ಯ ಮುಖ್ಯ ನ್ಯಾಯಮೂರ್ತಿಯವರು ಶ್ರೀ ಜಸ್ಟೀಸ್ ಆರ್.ಜೆ. ಬಾಬು, ನಿವೃತ್ತ ನ್ಯಾಯಾಧೀಶರು, ಕರ್ನಾಟಕ ಉಚ್ಚ ನ್ಯಾಯಾಲಯ ಇವರನ್ನು ರಾಜ್ಯ ಪೊಲೀಸ್ ದೂರುಗಳ ಪ್ರಾಧಿಕಾರದ ಅಧ್ಯಕ್ಷರನ್ನಾಗಿ ನೇಮಿಸಲು ಸೂಚಿಸಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 59 ಪೊಸಇ 2009 (ಭಾಗ), ಬೆಂಗಳೂರು, ದಿನಾಂಕ: 07ನೇ ಸೆಪ್ಟೆಂಬರ್ 2011**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಜಸ್ಟೀಸ್ ಆರ್.ಜೆ. ಬಾಬು, ನಿವೃತ್ತ ನ್ಯಾಯಾಧೀಶರು, ಕರ್ನಾಟಕ ಉಚ್ಚ ನ್ಯಾಯಾಲಯ ಇವರನ್ನು ರಾಜ್ಯ ಪೊಲೀಸ್ ದೂರುಗಳ ಪ್ರಾಧಿಕಾರದ ಅಧ್ಯಕ್ಷರನ್ನಾಗಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿಆರ್.ನಂ. 2209

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ :** ದಿನಾಂಕ 02–01–1998ರಂದು ರಾತ್ರಿ ಮಂಗಳೂರು ಜಿಲ್ಲಾ ಕಾರಾಗೃಹದಲ್ಲಿನ 5 ಜನ ಬಂಧಿಗಳು ಪರಾರಿಯಾದ ಬಗ್ಗೆ.

**ಓದಲಾಗಿದೆ :**
1. ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು ರವರ ಪತ್ರ ಸಂಖ್ಯೆ : ವಿಚಾರಣೆ : ಸಿಆರ್–35:98 ದಿನಾಂಕ : 06–03–1998.
2. ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 33 ಪಿಆರ್‌ಇ 98, ದಿನಾಂಕ : 14–05–1998.
3. ಕರ್ನಾಟಕ ಲೋಕಾಯುಕ್ತರವರ ಪತ್ರ ಸಂಖ್ಯೆ : ಎಂಐಎಸ್ : ಲೋಕ : ಎಂವೈಎಸ್ : ಜಿಇಎಸ್ : 662 : 98–99 ದಿನಾಂಕ : 23–06–1998.
4. ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 33 ಪಿಆರ್‌ಇ 98, ದಿನಾಂಕ : 13–07–1998.
5. ಸರ್ಕಾರಿ ಪತ್ರ ಸಂಖ್ಯೆ : ಹೆಚ್‌ಡಿ 33 ಪಿಆರ್‌ಇ 98, ದಿನಾಂಕ : 14–12–1998.
6. ಕರ್ನಾಟಕ ಲೋಕಾಯುಕ್ತರವರ ಪತ್ರ ಸಂಖ್ಯೆ : ಕಂಪ್ಲೇಂಟ್ : ಉಪಲೋಕಾ : ಮೈ : 226 : 98–99 : ಲೋಕ : ಐಎನ್‌ವಿ(ಜಿ) ಎಂಜಿ–14 : 99 ದಿನಾಂಕ : 27–05–2000.
7. ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 33 ಪಿಆರ್‌ಇ 98, ದಿನಾಂಕ : 30–08–2000.
8. ಕರ್ನಾಟಕ ಲೋಕಾಯುಕ್ತರವರ ಪತ್ರ ಸಂಖ್ಯೆ : ಕಂಪ್ಲೇಂಟ್ : ಉಪಲೋಕಾ : ಮೈ : 226 : 98–99 : ಡಿಆರ್‌ಇ–2, ದಿನಾಂಕ : 26–09–2000.
9. ತಿದ್ದುಪಡಿ ಆದೇಶ ಸಂಖ್ಯೆ : ಹೆಚ್‌ಡಿ 33 ಪಿಆರ್‌ಇ 98, ದಿನಾಂಕ : 24–10–2000.

10. ಕರ್ನಾಟಕ ಉಪ ಲೋಕಾಯುಕ್ತರವರ ಆದೇಶ ಸಂಖ್ಯೆ : ಲೋಕ : ಐಎನ್‌ಕ್ಯೂ : 106 : 14–3 : 2000–2001, ದಿನಾಂಕ : 07–12–2000.
11. ಕರ್ನಾಟಕ ಲೋಕಾಯುಕ್ತರವರ ಪತ್ರ ಸಂಖ್ಯೆ : ಲೋಕ : ಎಆರ್‌ಇ–3 : ಇಎನ್‌ಕ್ಯೂ–10 : 2001–2002, ದಿನಾಂಕ : 01–01–2003.
12. ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 33 ಪಿಆರ್‌ಇ 98 ಬೆಂಗಳೂರು, ದಿನಾಂಕ : 12–02–2004.
13. ಸರ್ಕಾರಿ ಪತ್ರ ಸಂಖ್ಯೆ : ಹೆಚ್‌ಡಿ 31 ಪಿಆರ್‌ಇ 2004, ದಿನಾಂಕ : 18–04–2009.
14. ಕರ್ನಾಟಕ ಉಪ ಲೋಕಾಯುಕ್ತರವರ ಪತ್ರ ಸಂಖ್ಯೆ : ಲೋಕ್/ಎಆರ್‌ಇ–3/ಇಎನ್‌ಕ್ಯೂ–10/2001–02, ದಿನಾಂಕ : 08–12–2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ : 06–03–1998ರ ಪತ್ರದಲ್ಲಿ ಹೆಚ್ಚುವರಿ ಪೋಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು ರವರು ಮಂಗಳೂರು ಜಿಲ್ಲಾ ಕಾರಾಗೃಹದಿಂದ ದಿನಾಂಕ : 02–01–1998 ರಂದು ರಾತ್ರಿ ಈ ಕೆಳಕಂಡ ಬಂದಿಗಳು ಪರಾರಿಯಾಗಿದ್ದು, ಇದಕ್ಕೆ ಸಂಬಂಧಿಸಿದಂತೆ ಗುಲ್ಬರ್ಗಾ ಕೇಂದ್ರ ಕಾರಾಗೃಹದ ಅಧೀಕ್ಷಕರಾದ ಶ್ರೀ ಎಂ.ಜಿ. ತಾವರ್‌ಖೇಡ್ ರವರು ಪ್ರಾರಂಭಿಕ ತನಿಖೆ ನಡೆಸಿ ದಿನಾಂಕ : 17–01–1998 ರಂದು ವರದಿಯನ್ನು ಸಲ್ಲಿಸಿರುವುದಾಗಿ ತಿಳಿಸಿರುತ್ತಾರೆ.

1. ಸಜಾ ಬಂದಿ ಸಂಖ್ಯೆ 7252 ದಿವಾಕರ್
2. ಸಜಾ ಬಂದಿ ಸಂಖ್ಯೆ 7250 ಲಕ್ಷ್ಮಣ ಪೂಜಾರಿ
3. ಸಜಾ ಬಂದಿ ಸಂಖ್ಯೆ 7249 ಸಿ. ಗೋವಿಂದನ್
4. ವಿಚಾರಣಾ ಬಂದಿ ಸಂಖ್ಯೆ 10874 ರಿಚರ್ಡ್ ಸ್ಟೀಪನ್ ಸಟೈಲರ್
5. ವಿಚಾರಣಾ ಬಂದಿ ಸಂಖ್ಯೆ 11770 ಅಶ್ರಫ್

ಪ್ರಾರಂಭಿಕ ವಿಚಾರಣಾ ವರದಿಯಲ್ಲಿ ಮೇಲಿನ ಬಂಧಿಗಳು ಪರಾರಿಯಾಗಿರುವುದಕ್ಕೆ ಈ ಕೆಳಕಂಡ ಸಿಬ್ಬಂದಿಗಳ ಕರ್ತವ್ಯಲೋಪ ಹಾಗೂ 1978ರ ಕರ್ನಾಟಕ ಕಾರಾಗೃಹಗಳ ಕೈಪಿಡಿಯ ನಿಯಮಗಳ ಉಲ್ಲಂಘಕ್ಕೆ ಕಾರಣರಾಗಿರುವುದರಿಂದ ಅವರುಗಳ ವಿರುದ್ಧ 1957ರ ಕರ್ನಾಟಕ ನಾಗರೀಕ ಸೇವಾ (ಸಿ.ಸಿ. ಮತ್ತು ಎ) ನಿಯಮಾವಳಿಗಳ ನಿಯಮ 11 ಮತ್ತು 13ನೇ ಪ್ರಕಾರ ಜಂಟಿ ಇಲಾಖಾ ವಿಚಾರಣೆ ನಡೆಸಲು ಸರ್ಕಾರದ ಆದೇಶವನ್ನು ಕೋರಿದ್ದರು.

1. ಶ್ರೀ ಕೆ.ಕೆ. ಪಾಟೀಲ್, ಸಹಾಯಕ ಅಧೀಕ್ಷಕ
2. ಶ್ರೀ ಬಿ.ಎಸ್. ನಟರಾಜ್, ಜೈಲರ್
3. ಶ್ರೀ ರಾಜಾರಾಂ, ವಾರ್ಡರ್
4. ಶ್ರೀ ಕೆ.ಜನಾರ್ಧನ, ಹೆಡ್ ವಾರ್ಡರ್
5. ಶ್ರೀ ಪಿ.ರಮೇಶ, ಹೆಡ್ ವಾರ್ಡರ್
6. ಶ್ರೀ ಗಣೇಶ ಶೆಟ್ಟಿಗಾರ್, ಹೆಡ್ ವಾರ್ಡರ್
7. ಶ್ರೀ ಬಿ.ಗಣೇಶ, ವಾರ್ಡರ್

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ : 14–05–1998ರ ಆದೇಶದಲ್ಲಿ ಕಾರಾಗೃಹಗಳ ಮಹಾ ನಿರೀಕ್ಷಕರು ಪ್ರಸ್ತಾಪಿಸಿರುವ ಸಿಬ್ಬಂದಿಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14–ಎ ನಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ದಿನಾಂಕ 02–01–1998 ರಂದು ಮಂಗಳೂರು ಜಿಲ್ಲಾ ಕಾರಾಗೃಹದಿಂದ ಬಂದಿಗಳು ಪರಾರಿಯಾಗಲು ಕಾರಣರಾದವರ ವಿರುದ್ಧ ವಿಚಾರಣೆಯನ್ನು ನಡೆಸಲು ಪ್ರಕರಣವನ್ನು ಲೋಕಾಯುಕ್ತಕ್ಕೆ ವಹಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿನಾಂಕ : 23–06–1998ರ ಪತ್ರದಲ್ಲಿ ಸದರಿ ಪ್ರಕರಣದಲ್ಲಿನ ಆರೋಪಿತ ಅಧಿಕಾರಿಗಳು/ನೌಕರರುಗಳ ಮೇಲೆ ತನಿಖೆ ಮಾಡಿಸಲು ಸರ್ಕಾರವು ಇಚ್ಛಿಸಿದಲ್ಲಿ, ಕರ್ನಾಟಕ ಲೋಕಾಯುಕ್ತ ಕಾಯ್ದೆ ಕಲಂ 7(2ಎ) ರನ್ವಯ ಯಾವ ಪ್ರಾಧಿಕಾರದ (ಅಂದರೆ ಮಾನ್ಯ ಲೋಕಾಯುಕ್ತರವರ ಅಥವಾ ಮಾನ್ಯ ಉಪ ಲೋಕಾಯುಕ್ತರವರ) ವ್ಯಾಪ್ತಿಯಲ್ಲಿ ತನಿಖೆ ಮಾಡಬೇಕು ಎಂಬುದರ ಬಗ್ಗೆ ನಿರ್ದಿಷ್ಟ ಮತ್ತು ಸ್ಪಷ್ಟ ಆದೇಶ ಪಡೆದುಕೊಂಡು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11 ರಡಿ ಹೇಳಿರುವ ವಿಧಾನದನ್ವಯ ಇಲಾಖಾ ವಿಚಾರಣೆಯನ್ನು ನಡೆಸಲು ಈ ಸಂಸ್ಥೆಗೆ ವಹಿಸಲು ಇಚ್ಛಿಸಿದಲ್ಲಿ ಆರೋಪಿತ ಅಧಿಕಾರಿಗಳಿಗೆ/ನೌಕರರುಗಳಿಗೆ ಆರೋಪ ಪಟ್ಟಿಯನ್ನು ಜಾರಿಗೊಳಿಸಿ, ಅವರಿಂದ ಉತ್ತರ ಪಡೆದು, ತತ್ಸಂಬಂಧದ ದಾಖಲಾತಿಗಳೊಂದಿಗೆ ಯಾವ ಪ್ರಾಧಿಕಾರದ (ಮಾನ್ಯ ಲೋಕಾಯುಕ್ತರವರ ಅಥವಾ ಮಾನ್ಯ ಉಪ ಲೋಕಾಯುಕ್ತರವರ) ವ್ಯಾಪ್ತಿಯಲ್ಲಿ ವಿಚಾರಣೆ ನಡೆಸಬೇಕು ಎನ್ನುವುದರ ಬಗ್ಗೆ ಸ್ಪಷ್ಟ ಮತ್ತು ನಿರ್ದಿಷ್ಟವಾದ ಮಾಹಿತಿಯೊಂದಿಗೆ ಪ್ರಸ್ತಾವನೆಯನ್ನು ಕಳುಹಿಸಿ ಕೊಡುವಂತೆ ಕೋರಿದ್ದರು.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ದಿನಾಂಕ : 13–07–1998ರ ಆದೇಶದಲ್ಲಿ ಕರ್ನಾಟಕ ಲೋಕಾಯುಕ್ತರವರು ಅವರ ಪತ್ರ ದಿನಾಂಕ : 23–06–1998ರ ಪತ್ರದಲ್ಲಿ ತಿಳಿಸಿದ ಸಂದರ್ಭಗಳಿಂದಾಗಿ ದಿನಾಂಕ : 14–05–1998 ರಂದು ಹೊರಡಿಸಲಾದ ಇಲಾಖಾ ವಿಚಾರಣೆಯ ಆದೇಶ ಸಂಖ್ಯೆ : ಹೆಚ್‌ಡಿ 33 ಪಿಆರ್‌ಇ 98ನ್ನು ತಕ್ಷಣವೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಹಿಂದಕ್ಕೆ ಪಡೆಯಲಾಯಿತು.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ದಿನಾಂಕ : 14–12–1998ರ ಪತ್ರದಲ್ಲಿ ಕರ್ನಾಟಕ ಲೋಕಾಯುಕ್ತ ಅಧಿನಿಯಮ, 1984ರ ಕಲಂ (7)(2ಎ)ರ ಮೇರೆಗೆ ಕೈದಿಗಳು ಪರಾರಿಯಾಗಲು ಕಾರಣರಾದ ಅಧಿಕಾರಿ ಹಾಗೂ ಸಿಬ್ಬಂದಿ ವರ್ಗದವರನ್ನು ಗುರುತಿಸಿ ಕೂಲಂಕಷವಾಗಿ ತನಿಖೆ ಮಾಡಲು ಉಪ ಲೋಕಾಯುಕ್ತ, ಕರ್ನಾಟಕ ಲೋಕಾಯುಕ್ತರವರ ಕಛೇರಿ, ಬೆಂಗಳೂರು ರವರಿಗೆ ಪ್ರಕರಣವನ್ನು ವಹಿಸಲಾಗಿದೆ. ಹಾಗೂ ಉಪ ಲೋಕಾಯುಕ್ತರವರ ವರದಿಗೆ ಸೂಕ್ತ ಶಿಫಾರಸ್ಸಿನೊಂದಿಗೆ ಸರ್ಕಾರಕ್ಕೆ ವರದಿ ಸಲ್ಲಿಸುವಂತೆ ಸಹ ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ದಿನಾಂಕ : 27–05–2000ರ ಪತ್ರದಲ್ಲಿ ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಮಾನ್ಯ ಉಪ ಲೋಕಾಯುಕ್ತರವರ ಕಾಯಿದೆ ಕಲಂ 12(3)ರನ್ವಯ ಶಿಫಾರಸ್ಸು ಮಾಡಲಾದ ವರದಿಯನ್ನು ಲಗತ್ತಿಸುತ್ತಾ, ಕರ್ನಾಟಕ ಲೋಕಾಯುಕ್ತ ಕಾಯ್ದೆ ಸೆಕ್ಷನ್ 12(4)ರನ್ವಯ ಸದರಿ ವರದಿಯ ಮೇರೆಗೆ ಮುಂದಿನ ಸೂಕ್ತ ಕ್ರಮ ತೆಗೆದುಕೊಂಡು, ತೆಗೆದುಕೊಂಡ ಕ್ರಮದ ಬಗ್ಗೆ 3 ತಿಂಗಳೊಳಗಾಗಿ ವರದಿಯನ್ನು ನೀಡುವಂತೆ ಕೋರಿದ್ದರು. ಉಪ ಲೋಕಾಯುಕ್ತರವರ ವರದಿಯಲ್ಲಿ ತನಿಖಾ ಕಾಲದಲ್ಲಿ ಸಂಗ್ರಹಿಸಲ್ಪಟ್ಟ ಮಾಹಿತಿ ಹಾಗೂ ದಾಖಲಾತಿಗಳನ್ನು ಪರಿಶೀಲಿಸಿದಾಗ ಆಪಾದಿತ ಸರ್ಕಾರಿ ನೌಕರರ ವಿರುದ್ಧದ ಆರೋಪವು ಮೇಲ್ನೋಟಕ್ಕೆ ಸತ್ಯಾಂಶದಿಂದ ಕೂಡಿದೆ ಎಂದು ಕಂಡು ಬಂದಿರುವುದರಿಂದ ಕರ್ನಾಟಕ ಲೋಕಾಯುಕ್ತ ಅಧಿನಿಯಮ ಕಲಂ 12(3)ರ ಅಡಿಯಲ್ಲಿ ಆರೋಪಿತ ಸರ್ಕಾರಿ ನೌಕರರ ವಿರುದ್ಧ ಉಗ್ರ ದಂಡನೆ ವಿಧಿಸುವ ವಿಧಿವಿಧಾನದನ್ವಯ ಶಿಸ್ತಿನ ಕ್ರಮ ಜರುಗಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14–ಎ ರನ್ವಯ ಈ ಸಂಸ್ಥೆಗೆ ವಹಿಸಲು ಶಿಫಾರಸ್ಸು ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (7)ರ ದಿನಾಂಕ 30–08–2000ರ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14–ಎ ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ದಿನಾಂಕ : 02–01–1998 ರಂದು ಮಂಗಳೂರು ಜಿಲ್ಲಾ ಕಾರಾಗೃಹದಿಂದ ಬಂಧಿಗಳು ಪರಾರಿಯಾಗಲು ಕಾರಣರಾದ ಅಧಿಕಾರಿ ಹಾಗೂ ನೌಕರರ ವಿರುದ್ಧ ವಿಚಾರಣೆಯನ್ನು ನಡೆಸಲು ಕರ್ನಾಟಕ ಲೋಕಾಯುಕ್ತ ರವರಿಗೆ ವಹಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (8)ರ ದಿನಾಂಕ 26–09–2000ರ ಪತ್ರದಲ್ಲಿ ನಿಬಂಧಕರು ಕರ್ನಾಟಕ ಲೋಕಾಯುಕ್ತ ರವರ ಕಛೇರಿ, ಬೆಂಗಳೂರು ರವರು ಕರ್ನಾಟಕ ಲೋಕಾಯುಕ್ತ, ಕಾಯ್ದೆ ಸೆಕ್ಷನ್ 12(3)ರ ಪ್ರಕಾರ ಪ್ರಕರಣವನ್ನು ಉಪ ಲೋಕಾಯುಕ್ತಕ್ಕೆ ವಹಿಸಬೇಕಾಗಿದ್ದು, ಲೋಕಾಯುಕ್ತಕ್ಕೆ ವಹಿಸಿರುವುದರಿಂದ, ದಿನಾಂಕ : 30–08–2000ರ ಸರ್ಕಾರಿ ಆದೇಶವನ್ನು ಪರಿಷ್ಕರಿಸಿ ಪ್ರಕರಣವನ್ನು ಉಪ ಲೋಕಾಯುಕ್ತಕ್ಕೆ ವಹಿಸುವಂತೆ ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (9)ರ ದಿನಾಂಕ : 24–10–2000ರ ತಿದ್ದುಪಡಿ ಅದೇಶದಲ್ಲಿ ಪ್ರಕರಣವನ್ನು ಲೋಕಾಯುಕ್ತಕ್ಕೆ ವಹಿಸಲಾಗಿದೆ ಎಂಬುದರ ಬದಲಾಗಿ ಕರ್ನಾಟಕ ಉಪ ಲೋಕಾಯುಕ್ತಕ್ಕೆ ವಹಿಸಲಾಗಿದೆ ಎಂದು ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (10)ರ ದಿನಾಂಕ : 07–12–2000ರ ಉಪ ಲೋಕಾಯುಕ್ತರವರ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) (3ನೇ ತಿದ್ದುಪಡಿ) ನಿಯಮ 1957ರ ನಿಯಮ 14–ಎ ಪ್ರಕಾರ ವಿಚಾರಣೆ ನಡೆಸುವುದಾಗಿ ತಿಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (11)ರಲ್ಲಿ ಮಾನ್ಯ ಲೋಕಾಯುಕ್ತರವರು ಶ್ರೀ ಬಿ.ಗಣೇಶ್, ವಾರ್ಡರ್, ಶ್ರೀ ರಾಜಾರಾಂ ವಾರ್ಡರ್, ಶ್ರೀ ಕೆ.ಜನಾರ್ಧನ, ಹೆಡ್ ವಾರ್ಡರ್, ಶ್ರೀ ಪಿ.ರಮೇಶ್, ಹೆಡ್ ವಾರ್ಡರ್, ಮತ್ತು ಶ್ರೀ ಗಣೇಶ್ ಶೆಟ್ಟಿಗಾರ್, ವಾರ್ಡರ್ ಇವರುಗಳು ಕರ್ತವ್ಯ ನಿರ್ಲಕ್ಷತೆಗೆ ಕಡ್ಡಾಯ ನಿವೃತ್ತಿಗೊಳಿಸಬೇಕೆಂದು ಶಿಫಾರಸ್ಸು ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (12)ರ ದಿನಾಂಕ : 12–02–2004ರ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14–ಎ ಅನ್ವಯ ಮಾನ್ಯ ಲೋಕಾಯುಕ್ತರು ಮಾಡಿರುವ ಶಿಫಾರಸ್ಸನ್ನು ಒಪ್ಪಿ, ಸದರಿ ನಿಯಮಗಳ ನಿಯಮ 8(iv) ರನ್ವಯ ದಿನಾಂಕ : 02–01–1998ರಂದು ಮಂಗಳೂರು ಜಿಲ್ಲಾ ಕಾರಾಗೃಹದಿಂದ ಬಂಧಿಗಳು ಪರಾರಿಯಾಗಲು ಕಾರಣರಾದ 5 ನೌಕರರನ್ನು ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆಯನ್ನು ವಿಧಿಸಲು ಆದೇಶಿಸಲಾಯಿತು.

ಈ ಮೇಲಿನ ಸರ್ಕಾರದ ಅದೇಶದ ವಿರುದ್ಧ ಗೌ:ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಈ ಮೇಲೆ ಸೂಚಿಸಲ್ಪಟ್ಟ ಐದು ಮಂದಿ ಸಿಬ್ಬಂದಿಗಳು ಅರ್ಜಿ ಸಂಖ್ಯೆ : 1529– 1533/2004ನ್ನು ದಾಖಲಿಸಿರುತ್ತಾರೆ. ಗೌ: ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಸದರಿ ಅರ್ಜಿಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ವಿಚಾರಣೆ ನಡೆಸಿ, ದಿನಾಂಕ : 20–10–2008ರಂದು ಲೋಕಾಯುಕ್ತರ ವಿಚಾರಣೆಯ ಆಧಾರದ ಮೇಲೆ ಸರ್ಕಾರವು ಹೊರಡಿಸಿದ ಆದೇಶ ಸರಿಯಿಲ್ಲವೆಂದು ಆದೇಶವನ್ನು ಅನೂರ್ಜಿತಗೊಳಿಸಿ ಉಪ–ಲೋಕಾಯುಕ್ತ ಹಂತದಲ್ಲಿ ವಿಚಾರಣೆ ನಡೆಸಲು ಮೇಲೆ ಓದಲಾದ ಕ್ರಮ ಸಂಖ್ಯೆ (13)ರಲ್ಲಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (14)ರ ದಿನಾಂಕ : 08–12–2009ರ ಪತ್ರದಲ್ಲಿ ಉಪಲೋಕಾಯುಕ್ತರು ದಿನಾಂಕ : 29–12–2002 ರಂದು ಸಲ್ಲಿಸಿರುವ ವರದಿಯನ್ನು ಲಗತ್ತಿಸುತ್ತಾ ದಿನಾಂಕ : 02–01–1998 ರಂದು ಮಂಗಳೂರು ಜಿಲ್ಲಾ ಕಾರಾಗೃಹದಿಂದ ಬಂದಿಗಳು ಪರಾರಿಯಾಗಲು ಕಾರಣರಾದ ಈ ಕೆಳಕಂಡ ನಾಲ್ಕು ನೌಕರರನ್ನು ಕಡ್ಡಾಯವಾಗಿ ನಿವೃತ್ತಿಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ. ಆದರೆ ಈಗಾಗಲೇ ಮೃತಪಟ್ಟಿರುವ ಶ್ರೀ ಪಿ.ರಮೇಶ್ ಇವರ ವಿರುದ್ಧದ ಕ್ರಮವನ್ನು ಕೈಬಿಡಲು ಸೂಚಿಸಿ, ಇವರ ಕುಟುಂಬಕ್ಕೆ ನಿವೃತ್ತಿ ವೇತನ ಮತ್ತು ಇತರ ನಿವೃತ್ತಿ ಸೌಲಭ್ಯಗಳನ್ನು ಮಂಜೂರು ಮಾಡುವಂತೆ ಶಿಫಾರಸ್ಸು ಮಾಡಿರುತ್ತಾರೆ.

1. ಶ್ರೀ ಕೆ.ಜನಾರ್ಧನ, ಹೆಡ್ ವಾರ್ಡರ್
2. ಶ್ರೀ ರಾಜಾರಾಂ, ಹೆಡ್ ವಾರ್ಡರ್
3. ಶ್ರೀ ಬಿ. ಗಣೇಶ, ವಾರ್ಡರ್
4. ಶ್ರೀ ಗಣೇಶ, ಶೆಟ್ಟಿಗಾರ್, ಹೆಡ್ ವಾರ್ಡರ್

ಮೇಲೆ ಸೂಚಿಸಿರುವ ಆರೋಪಿತರ ವಿರುದ್ಧದ ಆರೋಪಗಳು ಸಾಬೀತಾಗಿರುವುದನ್ನು ಪರಿಗಣಿಸಿ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 31 ಪಿಆರ್‌ಇ 2004, ಬೆಂಗಳೂರು, ದಿನಾಂಕ: 06ನೇ ಸೆಪ್ಟೆಂಬರ್ 2011**

ಮೇಲೆ ವಿವರಿಸಿರುವ ವಾಸ್ತವಾಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14–ಎ ರನ್ವಯ ಮಾನ್ಯ ಉಪಲೋಕಾಯುಕ್ತರವರು ಮಾಡಿರುವ ಶಿಫಾರಸ್ಸನ್ನು ಒಪ್ಪಿ, ಈ ಹಿಂದೆ ಹೊರಡಿಸಿದ ಸರ್ಕಾರಿ ಆದೇಶ ದಿನಾಂಕ : 12–02–2004ನ್ನು ಸ್ಥಿರೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಸೆರೆಮನೆ ಮತ್ತು ಸಿನಿಮಾ)

ಪಿಆರ್.ನಂ. 2210

## COMMERCE AND INDUSTRIES SECRETARIAT

**Sub :** Approval to the Project Proposal of M/s KPR Sugar Mills Pvt. Ltd., to establish a "5000 TCD White Crystal Sugar 34 MW Co-gen Power Plant & 90 KLPD Molasses Processing Plant" at Almel Village, Sindagi Taluk, Bijapur District.

**Read :** Proceedings of the 25th State High Level Clearance Committee (SHLCC) Meeting held on 14-07-2011.

**Preamble:**

M/s KPR Sugar Mills Pvt. Ltd., has proposed to establish a "5000 TCD White Crystal Sugar, 34 MW Co-gen Power Plant & 90 KLPD Molasses Processing Plant" at Almel Village, Sindagi Taluk, Bijapur District, with an investment of Rs. 410.76 Crores, generating employment to about 347 persons.

In the 25th State High Level Clearance Committee (SHLCC) Meeting held on 14-07-2011, the proposal of the Company was discussed and approved.

Government has examined the recommendations made by the State High Level Clearance Committee in the 25th Meeting held on 14-07-2011, in all aspects.

Hence the following order.

**Government Order No. CI 169 SPI 2011, Bangalore, Dated 22/08/2011**

Government is pleased to accord in principle approval to the Project Proposal of M/s KPR Sugar Mills Pvt. Ltd., to establish a " 5000 TCD White Crystal Sugar, 34 MW Co-gen Power Plant & 90 KLPD Molasses Processing Plant" at Almel Village, Sindagi Taluk, Bijapur District, with an investment of Rs. 410.76 Crores, generating employment to about 347 persons and extend the following infrastructure facilities, incentives and concessions

**INFRASTRUCTURE FACILITIES:**

1. **Land:** 318 acres of land, out of which 170 acres of own land to be converted by Deputy Commissioner, Bijapur District and balance 148 acres of land to be acquired and allotted by KIADB as SUC on consent (70%) at various Sy. No.s of Almel Village, Sindagi Taluk, Bijapur District.
2. **Water:** 5 MLD of water to be supplied by Bheema River. The project proponent to file a seprate application to Water Resources Department for consideration for allocation of water.
3. **Power:** 2500 KVA during the construction period to be serviced by HESCOM.
4. **Incentives & Concessions** As per applicable Industrial Policy of the State.

**General Terms and Conditions:**

1. **Environment:** The promoters to obtain CFE and CFO from KSPCB. Environment clearance from MOEF, GoI/ DFEE, GoK as applicable.
2. **Employment:** The Company shall prepare a plan for development of Human Resources required for the project, train local people and provide employment to these trained local youth and comply with the provisions of Industrial Policy of Govt. of Karnataka. A copy of Human Resources Development plan shall be sent to the Commissioner for I.D. & Director of Industries and Commerce for monitoring.
3. **Vendor Development:** Whereever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.
4. **Social Infrastrcture Development:** The Company is advised to take up social infrastructure development projects in the vicinity of the proposed location of the unit. A copy of such projects shall be sent to the Commissioner for I.D. & Director of Industries and Commerce for monitoring.
5. **Others:**
   a) The project proponents shall provide employment to atleast one member of the family of each land looser if the land is acquired through KIADB
   b) The project proponents shall adopt rainwater harvesting, waste water recycling and water conservation techniques. Zero discharge facility should be adopted wherever applicable.
   c) The promoters shall obtain renewed IEM certificate and take all statutory and other necessary clearances from the competent authorities including GOI and shall submit milestones/ progress in implementation of the project regularly, which will be monitored by the Department.

This approval is valid for a period of two years from the date of issue.

By Order and in the name of the Governor of Karnataka

**A.V. Srinivasa Dikshit**

Desk Officer (Technical Cell)

Commerce & Industries Department

P.R. 2211

